ನವ ಪ್ರಕಟನೆಗಳು

# ಬಯಲಾದ ಸಂಚು

( ಐತಿಹಾಸಿಕ ಕಥೆ )

ಶ್ರೀ ಲಕ್ಕಪ್ಪ ಅ. ಶಿರಹಟ್ಟಿ



೧೫

ಶ್ರೀ ಅರವಿಂದ ಗ್ರಂಥಾಲಯ, ಚಡಚಣ
ಜಿಲ್ಲಾ : ವಿಜಾಪುರ

ಶ್ರೀ ಅರವಿಂದ ಗ್ರಂಥಾಲಯ ಪ್ರಕಟನೆ—25

7 ನೇ ವರುಷದ 1ನೇ ಗ್ರಂಥ

# ಬಯಲಾದ ಸಂಚು

(ಐತಿಹಾಸಿಕ ಕಥೆ)

❋

ಶ್ರೀ ಲಕ್ಕಪ್ಪ ಅ. ಶಿರಹಟ್ಟಿ

ನಿವೃತ್ತ A. D. E. I. ವಿಜಾಪುರ



❋

ಶ್ರೀ ಅರವಿಂದ ಗ್ರಂಥಾಲಯ, ಚಡಚಣ

ಪ್ರಕಾಶಕರು :
ಪ್ರೊ. ಎಸ್. ಸಿಂಪಿ, ಎಂ. ಎ.
ಶ್ರೀ ಅರವಿಂದ ಗ್ರಂಥಾಲಯ, ಚಚಡಣ

ಬಸವಜಯಂತಿ, 23-4-1966

ಬೆಲೆ : ೧—೫೦

ಮುದ್ರಕರು :
ಬಸವರಾಜ ಹೊರಡಿ
ಲಲಿತ ಮುದ್ರಣಾಲಯ, ಧಾರವಾಡ

# ಮುನ್ನುಡಿ

ರಾಜರ ಕಥೆಗಳಲ್ಲಿ ಬಹುಶಃ ಅಧಿಕಾರ, ಪ್ರಾಯ, ದ್ರವ್ಯಗಳ ತಳಹದಿಯ ಮೇಲೆಯೇ ರೂಪುಗೊಂಡಿರುತ್ತವೆ. ಅಧಿಕಾರ, ಪ್ರಾಯ, ದ್ರವ್ಯ ಇವುಗಳಲ್ಲಿ ಒಂದೊಂದೇ ಬಡಕೊಂಡರೆ ಮನುಷ್ಯನು ಹುಚ್ಚೆದ್ದು ಕುಣಿಯುತ್ತಾನೆ. ಮೂರೂ ಬಡಕೊಂಡರೆ ಆತನ ಅವಸ್ಥೆ ಎಲ್ಲಿಗೆ ಮುಟ್ಟುವುದೋ ಹೇಳಲಿಕ್ಕಾಗದು. ಅದರಂತೆ ಆತನಿಂದ ಪರಿಸ್ಥಿತಿಯ ಪಾಡು ಏನಾದೀತು–ಹೇಳುವಂತಿಲ್ಲ. ಜಗದ್ರಂಗದ ಮೇಲೆ ನಾಯಕ–ಪ್ರತಿನಾಯಕರು ಕೂಡಿಕೊಂಡೇ ಬರುವುದು ಯಾವ ಕಾಲಕ್ಕೂ ತಪ್ಪಿಲ್ಲ; ತಪ್ಪುವದಿಲ್ಲ. ನಾಯಕನ ಸಾಹಸವು ಮೋದಾಂತವಾದರೆ ಧರ್ಮೋನ್ನತಿಯ ಕಾಲವೆನ್ನಬೇಕು; ನಾಯಕನ ಹೋರಾಟವು ಖೇದಾಂತವಾದರೆ ಧರ್ಮಗ್ಲಾನಿಯ ಕಾಲವೆನ್ನಬೇಕು. ಸಂಚು ಯಾವ ಕಾಲಕ್ಕೂ ನಡೆಯುತಕ್ಕುದೇ. ಆದರೆ ಅದು ಸಾಧಿಸಿತೋ ಬಯಲಾಯಿತೋ ಎನ್ನುವುದೇ ಮುಖ್ಯ.

ನಮ್ಮ ಈ ಐತಿಹಾಸಿಕ ಕಥೆಯಲ್ಲಿ ಸಂಚು ಬಯಲಾಗಿದೆ. ಆದ್ದರಿಂದಲೇ ಅದು “ಬಯಲಾದ ಸಂಚು” ಎನಿಸಿದೆ. ಕಥೆ ಐತಿಹಾಸಿಕವಷ್ಟೇ ಅಲ್ಲ; ಕನ್ನಡನಾಡಿನದೂ ಆಗಿದೆ. ಇಲ್ಲಿ ಸಂಚು ಮೂಡಿದ್ದು ಮುಖ್ಯವಲ್ಲ; ಬಯಲಾದದ್ದು ಮುಖ್ಯ. ಆದ್ದರಿಂದ ಇಲ್ಲಿ ಬಂದ ಕಥೆ ಕನ್ನಡಿಗರ ಹೆಮ್ಮೆಯದು; ಹೆಮ್ಮೆಯ ಕಾಲದ್ದು. ಕನ್ನಡಿಗರೂ ರಾಜ್ಯ ಕಟ್ಟಿದರು; ಕಟ್ಟಿದ ರಾಜ್ಯವನ್ನು ಅಚ್ಚುಕಟ್ಟಾಗಿ ನಿರ್ವಹಿಸಿದರು; ವಿಘ್ನ ಪರಂಪರೆಗಳು ಹೊರಗಿನಿಂದ ಅಡ್ಡಯಿಸಿದರೂ, ಒಳಗಿನಿಂದ ತಡೆಗಟ್ಟಿದರೂ ಅವುಗಳನ್ನು ಎದುರಿಸಿ ನಿಂತು ಹೋರಾಡಿದರು– ಎನ್ನುವ ವಿಷಯವು ಆಗಿಹೋದ ಕಥೆಯಾಗಿದೆ. ಕಥೆಯಾಗಿಯಾದರೂ ನಮ್ಮವರ ಕಿವಿಯಲ್ಲಿಳಿಯಲಿ. ಇಲ್ಲಿ ಬಂದ ಕಥೆ ಕೆಳದಿ ರಾಜ್ಯ ಮನೆತನಕ್ಕೆ ಸಂಬಂಧಿಸಿದ್ದು. ಭಾರತಕ್ಕೆ ಅದು ಕಾಳರಾತ್ರಿಯ ಕಾಲವೆಂದರೂ, ಆ ಮನೆತನದವರು ಇನ್ನೂರಾಅರವತ್ತು ವರ್ಷ ರಾಜ್ಯವಾಳಿದರೆಂದರೆ ಸಣ್ಣ ಮಾತೇ? “ಶೂರರ ಖಣಿ, ಧೀರರವಾಣಿ, ತೀರದ ವೀರರಸದ ವಾಣಿ” ಯೆನಿ

ಸಿದ ಕನ್ನಡಮ್ಮನ ಕುವರರ ಕಲಿತನದ ಆದರ್ಶವನ್ನು ಇಲ್ಲಿ ಕಾಣಬಹುದಾಗಿದೆ. ಐತಿಹಾಸಿಕ ಕಥೆಯೆಂದರೆ ಚಿನ್ನದ ಕಡಗ-ಉಂಗುರಗಳಿದ್ದ ಹಾಗೆ; ಗಟ್ಟಿ ಬಂಗಾರ. ಅರಗು ಬೆರೆತ ಆಭರಣವಲ್ಲ; ಟಂಕು ಸನಿಹಕ್ಕೆ ಸುಳಿಯದು.

ಈ ಐತಿಹಾಸಿಕ ಕಥೆಯನ್ನು ಅಣಿಗೊಳಿಸಿಕೊಟ್ಟವರು ಬಂಧುವರ ಶ್ರೀ. ಲ. ಅ. ಶಿರಹಟ್ಟಿ ಅವರು. ಅವರು ಅನುಭವಿಕ ಶಿಕ್ಷಕರು; ವಿದ್ಯಾಖಾತೆಯ ಅಧಿಕಾರಿಗಳು; ಸಾಹಿತಿಗಳು; ಕವಿತಾಶಕ್ತಿಯನ್ನೂ ಚೆನ್ನಾಗಿ ಪಳಗಿಸಿಕೊಂಡವರು. ಅವರ ಬರವಣಿಗೆಯಲ್ಲಿ ಭಾಷೆಯ ಸರಳತೆ-ಶುದ್ಧತೆಗಳು ಕಾಣಿಸುವಂತೆ, ವಿಷಯದಲ್ಲಿ ಪ್ರಾಮಾಣಿಕತೆ ಪ್ರಾಸಾದಿಕತೆಗಳು ಕಂಡುಬರುತ್ತವೆ. ನಿಜವಾಗಿ ಕೇಳಿದರೆ ಸಾಹಿತ್ಯ ನಿರ್ಮಾಣಕಾರ್ಯವನ್ನು ನಮಗಿಂತ ಮುಂದಿನ ಸಾಲಿನಲ್ಲಿ ನಿಂತು ಆರಂಭಿಸಿದವರು. ಅವರ ಆ ಶಕ್ತಿಯು ಶಿಕ್ಷಣಾಭಿವೃದ್ಧಿಯ ಕಾರ್ಯದಲ್ಲಿ ಸಾರ್ಥಕಗೊಂಡಿದ್ದರಿಂದ ಸಾಹಿತ್ಯನಿರ್ಮಾಣ ಕಾರ್ಯವು ವಿಪುಲಗೊಳ್ಳಲು ಸಾಧ್ಯವಾಗಿಲ್ಲ. ಆದರೆ ಈ ಕತೆಯಲ್ಲಿ ಕಂಡು ಬರುವ ಅವರ ಹೆಜ್ಜೆ, ತೂಕ, ತಾಳ್ಮೆಗಳಿಂದ ಅವರು ಮೇಲ್ತರದ ಸಾಹಿತಿಗಳೆಂದು ಗೊತ್ತಾಗದೆ ಇರಲಾರದು.

ಕನ್ನಾಡಿಗೆ ಅಭಿಮಾನಾಸ್ಪದವಾದ ಕತೆಯನ್ನು ಶುದ್ಧವಾಗಿ, ಸರಲವಾಗಿ, ಪ್ರಾಮಾಣಿಕತೆಯಿಂದ ಒದಗಿಸಿಕೊಡುವ ಕೆಲಸವನ್ನು ಶ್ರೀ. ಶಿರಹಟ್ಟಿಯವರು ಅದೆಷ್ಟು ಯಶಸ್ವಿಯಾಗಿ ಪೂರಯಿಸಿದ್ದಾರೆಂಬ ಸಂಗತಿಯು ವಾಚಕರಿಗೆ ಮನವರಿಕೆಯಾಗುವದು. ಇಂಥ ಗಟ್ಟಿ ಬಂಗಾರದ ರೂಪದಲ್ಲಿ ಅದೆಷ್ಟು ಆಭರಣಗಳು ಬಂದರೂ ಇಂದು ಸ್ವಾಗತಾರ್ಹವಾಗಿವೆ. ಶ್ರೀಯುತರು ತಮ್ಮ ಪರಿಪಕ್ವಾನುಭವ-ಅಭ್ಯಾಸಗಳನ್ನು ಸುರಿಯುವ ಸಾಹಿತ್ಯಕ್ಕೆ ಹಸಿಯಾರಿದ ಲೇಖನಿಯಾಗಿಲ್ಲವೆಂದು ಹಾರಯಿಸುವೆನು.

ಚಡಚಣ
6-2-66

—ಸಿಂಪಿ ಲಿಂಗಣ್ಣ

# ಅರಿಕೆ



"ಬಯಲಾದ ಸಂಚು" ಗ್ರಂಥದಿಂದ ನಮ್ಮ ಗ್ರಂಥ ಮಾಲೆಯು ೭ನೇ ವರ್ಷದಲ್ಲಿ ಅಡಿಯಿಡುತ್ತಿದೆ. ಗಲಭೆಯಿಲ್ಲದ ನಮ್ಮ ಸಾಹಿತ್ಯಸೇವೆಯ ಪರಿಣಾಮವಾಗಿ ನಾವು ಇಪ್ಪತ್ತೈದನೆಯ ಪ್ರಕಟನೆಯನ್ನು ವಾಚಕರ ಕೈಗೆ ಕೊಡುತ್ತಿರುವೆವು. ಈ ವಿಷಯವು ನಮಗೆ ಬಹು ಸಂತೋಷದಾಯಕ ವಾಗಿದೆ. ಈ ಕೆಲಸದಲ್ಲಿ ನಮ್ಮ ಗ್ರಾಹಕರೂ ಪೋಷಕರೂ ತೋರಿಸುತ್ತಿರುವ ಆಸ್ಥೆಗಾಗಿ ಕೃತಜ್ಞರಾಗಿದ್ದೇವೆ. ಆದರೆ ಅದು ಅಷ್ಟೇ ಸಾಲದು. ಕದ ತಿನ್ನ ನಿಂತವನಿಗೆ ಹಪ್ಪಳ ಕೊಟ್ಟಂತಾಗಿದೆ. ಅದರಿಂದ ಹೊಟ್ಟೆತುಂಬುವುದಂತೂ ಇರಲಿ, ತಿರುಗಿ ಕೇಳಿದರೆ ಹಸಿವೆಯ ಕಿಚ್ಚು ಇನ್ನಿಷ್ಟು ಉರಿದೇಳುತ್ತಿದೆ.

ಸಾಹಿತ್ಯ, ಗ್ರಂಥ ಎಂದರೆ ನಮ್ಮವರಿಗೆ ನಿರುತ್ಸಾಹ – ಬೆಸರಗಳೇ ಮೂಡಿ ನಿಲ್ಲುತ್ತಿರುವಾಗ ಉತ್ಸಾಹವೆಲ್ಲಿಂದ ಬಂದೀತು? ಅನೇಕ ಸಾರೆ ನಮ್ಮ ಗ್ರಾಹಕರು ನಮ್ಮನ್ನು ಅಕ್ಷಮ್ಯ ಅಪರಾಧ ಮಾಡಿದವರನ್ನು ಕಂಡಂತೆ ಕಾಣುತ್ತಾರೆ. "ಮಾಡಬಾರದ ಕೆಲಸ ಮಾಡಿದ್ದೇವೆ. ಹೇಗಾದರೂ ಮಾಡಿ ಹೊಟ್ಟೆಯಲ್ಲಿ ಹಾಕಿಕೊಳ್ಳಿರಿ" ಎಂದು ಅಂಗಲಾಚುವಂಥ ಪರಿಸ್ಥಿತಿಯಲ್ಲಿ ನಾವಿದ್ದಂತೆ ಭಾವಿಸುತ್ತಾರೆ. ಈ ಅಸಡ್ಡೆ ನಮ್ಮ ನಾಡಿಗರ ಮನದಿಂದ ಕಿತ್ತಿ ಹೋದಹಾಗೆ ಸಾಹಿತ್ಯ ಸಂಸ್ಕೃತಿಗಳು ಮೈಚಳಿ ಬಿಟ್ಟು ಉಸಿರಾಡಿಸುವಂತಾಗುತ್ತದೆ. ಹಾಗಾಗದೆ ಉಳಿದರೆ ನಾವು, ನಿಂತಲ್ಲಿಯೇ ತ್ರಿಶಂಕುಸ್ವರ್ಗವನ್ನು ಕಟ್ಟಿಕೊಂಡು ಮೆಲಕ್ಕೂ ಏರದೆ, ಕೆಳಕ್ಕೂ ಬೀಳದೆ ಆಣೆಹಾಕಿ ನಿಲ್ಲಿಸಿದವನ ಸ್ಥಿತಿಯಲ್ಲಿ ನೇತಾಡುತ್ತೇವೆ.

ನಮ್ಮ ಗ್ರಂಥಮಾಲೆಗೆ, ಹೃದಯದಾರಿದ್ರ್ಯದಿಂದ ಅಪಚಾರವನ್ನೆಸಗುವದರಲ್ಲಿ ದುರ್ದೈವದಿಂದ ಮಹಾಸ್ವಾಮಿಗಳಿರುವಂತೆ, ಅತ್ಯುಚ್ಚಸ್ಥಾನವನ್ನೇರಿದ ಅಧಿಕಾರಿಗಳೂ ಇದ್ದಾರೆ. ಹಳ್ಳಿಯ ಶಿಕ್ಷಕರಿರುವಂತೆ ಹೊಸಯುಗದ

ವತನದಾರರೂ ಇದ್ದಾರೆ. ಗ್ರಾಹಕರಾಗಿ ಉಳಿಯುವದಕ್ಕೆ ಮೌನಸಮ್ಮತಿಯನ್ನಿತ್ತು, ವರ್ಷಾಂತ್ಯದಲ್ಲಿ ಚಂದಾಕೊಡದೆ ನಿಲ್ಲಿಸಿಬಿಡಿರೆಂದು ಬರೆಯುವ ಅಥವಾ ಗ್ರಂಥಗಳೇ ಸರಿಯಾಗಿ ಬಂದಿಲ್ಲವೆಂದು ಮುಖಭಂಗಗೊಳಿಸುವ ಗ್ರಾಹಕ ಬಂಧುಗಳೂ ಇದ್ದಾರೆ. ಗ್ರಂಥಮಾಲೆ ನಡೆಸುವದೆಂದರೆ ಹಾಲು ಮೊಸರುಗಳನ್ನು ಹೊತ್ತು ಮನೆ ಮನೆ ತಿರುಗಿ, ಸಂದಿಗೊಂದಿಗಳನ್ನು ಸುತ್ತಿ ಮಾರುವ ಕಾಯಕವೆಂದು ನಾವು ಭಾವಿಸಿರದಿದ್ದರೆ, ಇಷ್ಟು ಹೊತ್ತಿಗೆ ಸಂದಿಯೊಳಗಿನ ಕತ್ತಲು ಕೋಣೆಯಲ್ಲಿ ಕಳ್ಳಸೆರೆಯನ್ನಿಟ್ಟು ತೆರಪಿಲ್ಲದೆ ಬಂದು ನಗದು ವ್ಯಾಪಾರ ನಡೆಸುವ ಗ್ರಾಹಕರನ್ನು ಪಡೆಯುವಂಥ ಇನ್ನಾವುದೋ 'ಕಾಯಕ'ಕ್ಕೆ ಇಳಿಯುತ್ತಿದ್ದೆವು.

"ಬಯಲಾದ ಸಂಚು" ಎಂಬ ಐತಿಹಾಸಿಕ ಕಥೆಯನ್ನು ನಮ್ಮ ಗ್ರಂಥ ಮಾಲೆಗೆ ಒದಗಿಸಿಕೊಟ್ಟು, ಅದಕ್ಕೆ ಇನ್ನೊಂದು ಶೋಭೆಯನ್ನುಂಟು ಮಾಡಿದ ಶ್ರೀ ಲ. ಅ. ಶಿರಹಟ್ಟಿ ನಿವೃತ್ತ A. D. E. I. ಅವರಿಗೆ ನಾವು ಋಣಿಗಳಾಗಿದ್ದೇವೆ.

ಪ್ರತಿಯೊಬ್ಬರು ಓದಿ ಅರಗಿಸಿಕೊಳ್ಳಬಹುದಾದ ತತ್ತ್ವ, ಸುಲಭವೂ ಲಲಿತವೂ ಆದ ನಿರೂಪಣೆ ಇವುಗಳಿಂದ ವಾಚಕರಲ್ಲಿ ಭಾವೈಕ್ಯವೂ ಸದಭಿರುಚಿಯೂ ಉಂಟಾಗಿ ಯುಗವಾಣಿಗೆ ಕಿವಿಗೊಡಲು ಆಸ್ಪದವಾಗುವದೆಂದು ಬಗೆದಿರುವೆವು. ವರ್ಷಕ್ಕೆ ೫ ರೂ. ಕೊಟ್ಟು ಗ್ರಾಹಕರಾದವರಿಗೆ ೬ ರೂ.ಗಳಿಗೆ ಮಿಕ್ಕಿದ ಬೆಲೆಯ ನಾಲ್ಕು ಪುಸ್ತಕಗಳು ಮನೆಯ ಬಾಗಿಲಿಗೆ ಅಂಚೆ ವೆಚ್ಚವಿಲ್ಲದೆ ಬರುವವು. ಆದ್ದರಿಂದ ಪ್ರತಿಯೊಂದು ಪುಸ್ತಕವು ಮುಕ್ಕಾಲು ಬೆಲೆಗೆ ದೊರಪಕಿಂತಾಗುವದು.

ಅಂದವಾಗಿ ಸಕಾಲಕ್ಕೆ ಮುದ್ರಿಸಿಕೊಟ್ಟ ಲಲಿತ ಮುದ್ರಣಾಲಯದ ಶ್ರೀ ಬಸವರಾಜ ಹೊರಡಿ ಅವರಿಗೆ ಉಪಕೃತರಾಗಿದ್ದೇವೆ.

ಚಡಚಣ —ಶಿಂಪಿಲಿಂಗಣ್ಣ

೬–೨–೬೬

# ಬರೆದವನ ಬಿನ್ನಹ

ಭಾರತದ ರಾಜಕೀಯದಲ್ಲಿ ಕೆಳದಿ (ಬಿದನೂರು) ರಾಜ್ಯವು ಮಹತ್ವದ ಪಾತ್ರವಾಡಿದೆ. ಅದರ 260 ವರ್ಷಗಳ ಬಾಳಿನಲ್ಲಿ, ಕೇಳಿದರೆ ವೈನವಿರೇಳುವ-ಕನ್ನಡಿಗರು ಅಭಿಮಾನಿಸುವ-ಕಲ್ಯಾಣಕಾರಕ ಮಹಾಘಟನೆಗಳು ಹಲವು ನಡೆದುಹೋಗಿವೆ. ಒಂದೊಂದನ್ನು ವಿವರಿಸಿದರೆ ಒಂದೊಂದು ಮಹಾ ಗ್ರಂಥವಾಗುವದು. ಈ ಕಾಲದ ಹೆಸರಾಂತ ಕನ್ನಡ ಲೇಖಕರು ಈ ಕಾರ್ಯವನ್ನು ಅಗತ್ಯವಾಗಿ ಕೈಕೊಳ್ಳಬೇಕೆಂದು ಬಿನ್ನವಿಸುವೆ.

ಕೇವಲ ಓದುಗರ ಮನಂಜನೆಯ ಉದ್ದೇಶದಿಂದ, ಈ ರಾಜಮನೆತನದಲ್ಲಿ ರಾಜ್ಯದಾಹದಿಂದೆದ್ದ ಕಲಹದ ಒಂದು ಸಾಮಾನ್ಯ ಸಂದರ್ಭವನ್ನು ಮಾತ್ರ ಕಥಾವಸ್ತುವನ್ನಾಗಿ ಬಳಸಿ, ನಾಲ್ವತ್ತು ವರ್ಷಗಳ ಹಿಂದೆ ಈ ಕಥೆಯನ್ನು ಬರೆದೆನು. ಬೆಳಕಿಗೆ ಬರಲು ದಾರಿಸಿಗದೆ ಹಸ್ತಪ್ರತಿ ಇದುವರೆಗೆ ಮೂಲೆಗುಂಪಾಗಿದ್ದಿತು. ಒಂದೆರಡು ಸಲ ಕಣ್ಣಿಗೆ ಬಿದ್ದಾಗ 'ನನ್ನವಸ್ಥೆಯೇನು?' ಎನ್ನುವಂತಿತ್ತು. ಈ ಸಲ ಕೈಗೆ ಹತ್ತಿದಾಗ ನನಗಿರುವ ಬಿಡುವು ಅದನ್ನು ತೆರೆದು ನೋಡುವಂತೆ ಮಾಡಿತು. ಮತ್ತೆ ಅಲ್ಲಲ್ಲಿ ಸ್ವಲ್ಪ ಸರಿಪಡಿಸಿ ಬರೆಯುವದೂ ಆಯಿತು. ಮುಂದೇನು? ಯಾರಾದರೊಬ್ಬರು ಮೇಲಕ್ಕೆತ್ತುವವರ ಹತ್ತಿರಕ್ಕೆ ಕಳುಹಬೇಕೆಂದು ಆಲೋಚಿಸುತ್ತಿರುವಾಗ, ನನ್ನ ಸ್ನೇಹಿತರೂ ಹಿರಿಯ ಸಾಹಿತಿಗಳೂ ಆದ ಶ್ರೀ ಸಿಂಪಿ ಲಿಂಗಣ್ಣನವರ ನೆನಪಾಯಿತು. ಇವರೆಡೆಗೆ ಕಳುಹಿದೆ. ಸ್ನೇಹಿತನ ಅಭಿಮಾನದಿಂದ ಕೈಗೆತ್ತಿಕೊಂಡರು. ಅಂದವಾದ ಮುನ್ನುಡಿಯಿಂದ ಅಲಂಕರಿಸಿದರು. ಹೊಸ ಹೆಸರಿನಿಂದ ಕರೆದರು. ತಮ್ಮ ಅರವಿಂದ ಗ್ರಂಥಮಾಲೆಯಲ್ಲಿ ಪ್ರಕಟಿಸಿ ಕನ್ನಡಿಗರ ಕೈಗೆ ಕೊಡುತ್ತಿದ್ದಾರೆ. ಇವರಿಗೆ ನನ್ನ ಅನಂತ ಕೃತಜ್ಞತೆ—

ಸಂವತ್ಸರ ಪ್ರತಿಪದೆ ೧೮೮೮ ಶಕೆ — ಲ. ಅ. ಶಿರಹಟ್ಟಿ

ವಿಜಾಪುರ.

# ಪರಿವಿಡಿ


| | | ಪುಟ |
|---|---|---|
| | ಕತೆಯ ಮೊದಲಿಗಿರುವ ಕೆಳದಿಯ ಇತಿಹಾಸ. | |
| ೧. | ಸೇಡು ತೀರಿಸದೆ ಬಿಡುವದಿಲ್ಲ | ೧ |
| ೨. | ಈ ಅಪಮಾನದ ಸೇಡು | ೬ |
| ೩. | ಭಾಗ್ಯದ ಬಾಗಿಲು ತೆರೆಯಿತು | ೧೨ |
| ೪. | ಬಯಸಿ ಬೇಡಿದ ರಾಜಪದವಿ | ೧೯ |
| ೫. | ಇದೇನು ಅನಾಹುತ | ೨೫ |
| ೬. | ಸಂಚು ಬಯಲಾಯಿತು | ೩೧ |
| ೭. | ಸಹನೆ | ೩೬ |
| ೮. | ಅಂತಃಶುದ್ಧಿ. | ೪೩ |
| ೯ | ರಾಕ್ಷಸೀ ಮಹತ್ವಾಕಾಂಕ್ಷೆ | ೫೩ |
| ೧೦. | ಧರ್ಮವೇ ಜಯ ಪಡೆಯುವದು | ೬೧ |
| ೧೧. | ನೀತಾ-ನೀತಿಯ ವಿಜಯ | ೭೦ |
| | ಕತೆಗೆ ಕೊನೆಯಾಗಿರುವ ಇನ್ನು ಕೆಲವು ಐತಿಹಾಸಿಕ ಸಂಗತಿಗಳು | |

# ಕತೆಯ ಮೊದಲಿಗಿರುವ ಕೆಳದಿಯ ಇತಿಹಾಸ

ಮಲೆನಾಡ ನಡುವೆ 'ಪಳ್ಳಿವಯಲು' ಎಂಬ ಗ್ರಾಮ. ಅಲ್ಲಿ ಬಸವಪ್ಪನೆಂಬವನು ಕೃಷಿಕಾಯಕದಿಂದ ಸುಖಜೀವಿಯಾಗಿದ್ದನು. ಅವನಿಗೆ ಚೌಡಪ್ಪ, ಭದ್ರಪ್ಪ ಎಂಬಿಬ್ಬರು ಮಕ್ಕಳು. ಬಸವಪ್ಪ ಬೇಗನೆ ಶಿವೈಕ್ಯನಾದುದರಿಂದ ಎಳೆಹರಯದಲ್ಲಿ ಚೌಡಪ್ಪನಿಗೆ ಮನೆತನದ ಭಾರಬಿತ್ತು. ಇವನು ಈಶ್ವರನಲ್ಲಿ ಒಳ್ಳೆಯ ಭಕ್ತಿಯುಳ್ಳವನು. ಈಶ್ವರ ಕೃಪೆಯಿಂದ ಹೊಲದಲ್ಲಿ ಇವನಿಗೆ ಒಂದು ನಿಕ್ಷೇಪವೂ 'ನಾಗರಮುರಿ' ಎಂಬ ಖಡ್ಗವೂ ದೊರೆತವು. ಇವುಗಳ ಬಲದಿಂದ ಚೌಡಪ್ಪನು ಹಲವು ಸತ್ಕಾರ್ಯಗಳನ್ನೆಸಗಿ ಸುತ್ತಲಿನ ಹಳ್ಳಿಗಳಲ್ಲಿ ಕೀರ್ತಿ ಪಡೆದನು. ಹಲವು ಜನರಿಗೆ ಮುಂದಾಳಾಗಿ ಬೆಳೆದನು. ಬಲ್ಲಾಳುತನದ ಕೆಲಸಗಳಲ್ಲಿಯೂ ಹೆಸರು ಹೊಂದಿದನು. ಆತನ ಪ್ರಸಿದ್ಧಿಯು ಸುತ್ತಲೂ ಪಸರಿಸಿತು; ವಿಜಯನಗರದ ರಾಯರ ಕಿವಿಗೂ ಮುಟ್ಟಿತು. ಒಮ್ಮೆ ಪಶ್ಚಿಮದಲ್ಲಿ ಮಲೆತುನಿಂತ ಬೇಡರ ಬಂಡನ್ನು ಮುರಿಯಲು ಯಾರನ್ನು ಕಳಿಸಬೇಕೆಂದು ವಿಜಯನಗರದ ಅಚ್ಯುತರಾಯನ ದರಬಾರದಲ್ಲಿ ವಿಚಾರ ನಡೆದಿದ್ದಿತು. ಆಗ ಕೆಲವರು ಚೌಡಪ್ಪನ ಹೆಸರನ್ನು ಸೂಚಿಸಿದರು. ರಾಯನು ಚೌಡಪ್ಪನನ್ನು ಕರೆಯಿಸಿ ಆದರಿಸಿ, ಆ ಬಂಡನ್ನು ಮುರಿಯಲು ನಿಯಮಿಸಿ ಕಳುಹಿದನು. ಚೌಡಪ್ಪನು ಶೌರ್ಯದಿಂದಲೂ ಸಾಹಸದಿಂದಲೂ ಬಂಡುಗಾರರ ಬಲವನ್ನು ನಾಶಮಾಡಿ, ಮುಖ್ಯರಾದವರನ್ನು ಸೆರೆಹಿಡಿದು ವಿಜಯನಗರಕ್ಕೆ ಒಯ್ದನು. ರಾಯನು ಅತಿ ಸಂತುಷ್ಟನಾಗಿ ಚೌಡಪ್ಪನಂಥವರು ತನ್ನ ಆಶ್ರಯದಲ್ಲಿರುವದು ಅವಶ್ಯವೆಂದು, ಅವನಿಗೆ ಕೆಳದಿ, ಇಕ್ಕೇರಿ, ಮೋದೂರು, ಪೆರ್ಬಯಲೆ ಮುಂತಾದ ಎಂಟು ನಾಡುಗಳನ್ನು ಇನಾಮಾಗಿ ಕೊಟ್ಟು ಅವುಗಳ 'ನಾಯಕ'ನೆಂಬ ಬಿರುದನ್ನೂ ಛತ್ರಚಾಮರಾದಿ ರಾಜ ಚಿಹ್ನಗಳನ್ನೂ ಕೊಟ್ಟು ಮನ್ನಿಸಿದನು. ಕಿ. ವ. 1500ರಲ್ಲಿ ಚೌಡಪ್ಪನಾಯಕನಿಗೆ ಕೆಳದಿಯ ಅರಮನೆಯಲ್ಲಿ ಪಟ್ಟಾಭಿಷೇಕವಾಯಿತು.

ಇವನ ತರುವಾಯ ಮಗನಾದ ಸದಾಶಿವರಾಯ ನಾಯಕನಾದರೂ ವಿಜಯನಗರದ ರಾಯರಿಗೆ ಸಹಾಯಕವಾಗಿ ಹಲವು ಯುದ್ಧಗಳಲ್ಲಿ ಜಯ ಪಡೆದು ರಾಯರ ಪ್ರೀತಿಯನ್ನು ಸಂಪಾದಿಸಿ ಇನ್ನಿಷ್ಟು ಘನತೆಗೇರಿದನು.

ಇವನ ಮಕ್ಕಳು ದೊಡ್ಡಸಂಕಣ್ಣನಾಯಕ, ಚಿಕ್ಕಸಂಕಣ್ಣನಾಯಕ ಎಂಬವರು. ದೊಡ್ಡಸಂಕಣ್ಣನಾಯಕನು ಹಲವು ವರ್ಷ ರಾಜ್ಯನಾಳಿ ಬಳಿಕ ವೈರಾಗ್ಯ ತಾಳಿ, ರಾಜ್ಯಭಾರವನ್ನು ತಮ್ಮನಿಗೊಪ್ಪಿಸಿ ಕ್ಷೇತ್ರಯಾತ್ರೆಗಳಿಗಾಗಿ ಉತ್ತರ ಹಿಂದುಸ್ಥಾನವಲ್ಲೆಲ್ಲ ಸಂಚರಿಸಿದನು ಒಮ್ಮೆ ದಿಲ್ಲಿಗೂ ಹೋದನು ಅಲ್ಲಿ ಘನವಂತನಾದ ಅಕಬರನ ಆಳಿಕೆ, ಅವನ ದರಬಾರದಲ್ಲಿದ್ದ 'ಅಂಕುಶಖಾನ' ನೆಂಬ ಜಟ್ಟಿಯು ದ್ವಂದ್ವಯುದ್ಧದಲ್ಲಿ ತನ್ನನ್ನು ಗೆಲ್ಲುವವರು ಯಾರೂ ಇಲ್ಲ ವೆಂದು, ತನ್ನ ಖಡ್ಗವನ್ನು ದಿಲ್ಲಿಯ ಅಗಸಿಗೆ ಕಟ್ಟಿಸಿ ಮೆರೆಯುತ್ತಿದನು. ಸಂಕಣ್ಣನಾಯಕನು ನೋಡಿ ಅದನ್ನು ತೆಗೆಯಿಸಿಬಿಟ್ಟನು. ಬಾದಶಹನು ಅವನನ್ನು ಕರೆಯಿಸಿ, ತಮ್ಮ ಜಟ್ಟಿಯೊಡನೆ ಯುದ್ಧ ಮಾಡ ಹೇಳಿದನು. ಈ ಕನ್ನಡಕಲಿ ಸಂತೋಷದಿಂದ ಸಿದ್ಧನಾದನು. ಕಣದಲ್ಲಿ ಅಂಕುಶಖಾನನಿಗೆ ಒಳ್ಳೇ ಸೊಕ್ಕು! ವೈರಿಯನ್ನು ಕ್ಷಣದಲ್ಲಿ ಕೊಲ್ಲುವೆನೆನ್ನುತ್ತಿದ್ದನು. ಸಂಕಣ್ಣ ನಾಯಕನು ಬರಿಗೈಯಿಂದ ಇದ್ದುದನ್ನು ನೋಡಿ ಬಾದಶಹನು ಒಂದು ಒಳ್ಳೆಯ ಖಡ್ಗವನ್ನು ತರಿಸಿಕೊಟ್ಟನು. ಸಂಕಣ್ಣನು ಅದನ್ನು ಝಳಪಿಸಲು ಅದು ಮುರಿದು ಬಿತ್ತು. ತನ್ನ ಟೊಂಕದಲ್ಲಿ ಸುತ್ತಿದ 'ನಾಗರಮುರಿ' ಖಡ್ಗ ವನ್ನು ಹೊರತೆಗೆದನು. ಕಾಳಗಕ್ಕೆ ಮೊದಲಾಯಿತು. ಕೊನೆಯಲ್ಲಿ ಕರ್ನಾಟಕ ವೀರನು ಖಾನನನ್ನು ತುಂಡರಿಸಿದನು; ಕನ್ನಡಿಗರ ಕಲಿತನವನ್ನು ಪ್ರದರ್ಶಿಸಿದನು. ಸಭೆಗೆ ಸಭೆಯೇ ಬೆರಗುಗೊಂಡಿತು. ಬಾದಶಹನು ಆನಂದದಿಂದ ಇಳಿದು ಬಂದು ಸಂಕಣ್ಣನಾಯಕನನ್ನು ಆದರಿಸಿದನು. ಕೆಲವು ಭೂಮಿಯನ್ನು ಆತನಿಗೆ ಬಹುಮಾನವಾಗಿ ಕೊಟ್ಟನು. ಸಂಕಣ್ಣನಾಯಕನು ಆ ಭೂಮಿಯನ್ನು ಕಾಶಿಯ ಯಾತ್ರಿಕರ ಸೌಕರ್ಯಕ್ಕಾಗಿ ಉಪಯೋಗಿಸಲು ದಾನಕೊಟ್ಟು ದಕ್ಷಿಣಕ್ಕೆ ಬಂದನು. ಮುಂದಿನ ಆಯುಷ್ಯವನ್ನು ಪಾರ ಮಾರ್ಥಿಕ ವಿಚಾರದಲ್ಲಿ ಕಳೆದನು.

ಈ ದೊಡ್ಡ ಸಂಕಣ್ಣನಾಯಕನಿಗೆ ರಾಮರಾಜನಾಯಕ, ವೆಂಕಟ ನಾಯಕ ಎಂಬ ಇಬ್ಬರು ಮಕ್ಕಳಿದ್ದರು. ಚಿಕ್ಕಸಂಕಣ್ಣನಾಯಕನ ತರು ವಾಯ ರಾಮರಾಜನಾಯಕನು ರಾಜನಾದನು. ಇವನು ಕೆಳದಿಯ ರಾಜ್ಯಕ್ಕೆ ಇಕ್ಕೇರಿಯನ್ನು ರಾಜಧಾನಿ ಮಾಡಿದನು.

ಚೌಡಪ್ಪನಾಯಕನಿಂದ ಈ ಕತೆಗೆ ಸಂಬಂಧಿಸಿರುವವರ ವರೆಗಿನ ಕೆಳದಿಯ ರಾಜರ ವಂಶಾವಳಿಯನ್ನು ಈ ಕೆಳಗೆ ಕೊಟ್ಟಿದೆ:

(ಸಂಖ್ಯೆಗಳು ಪಟ್ಟಾಭಿಷೇಕದ ಕ್ರಿ. ವರ್ಷಗಳು)

1. ಚೌಡಪ್ಪನಾಯಕ 1500

2. ಸದಾಶಿವರಾಯ ನಾಯಕ 1514

3. ದೊಡ್ಡಸಂಕಣ್ಣನಾಯಕ 1546   4. ಚಿಕ್ಕ ಸಂಕಣ್ಣನಾಯಕ 1559

5. ರಾಮರಾಜನಾಯಕ 1571   6. ವೆಂಕಟನಾಯಕ 1583

ವೀರಒಡೆಯ   ಬಸವಲಿಂಗ   ಭದ್ರಪ್ಪ   (ಮಗಳು) ಹಿರಿಯಮ್ಮ + (ಪತಿ) ವಿರೂಪಾಕ್ಷರಾಯ ಜಂಬೂರ

7. ವೀರಭದ್ರನಾಯಕ 1630   (ಮಗಳು) ವೀರಾದೇವಿ + (ಪತಿ) ಸದಾಶಿವ ಜಂಬೂರ

....ಇತ್ಯಾದಿ....

('ಕೆಳದಿನೃಪವಿಜಯ'ದಿಂದ)

ಈ ರಾಜ್ಯಮನೆತನದವರು 260 ವರ್ಷ ರಾಜ್ಯವಾಳಿದರು. ಕೆಳದಿ, ಬಳಿಕ ಇಕ್ಕೇರಿ, ಆಮೇಲೆ ಬಿದನೂರು ಈ ರಾಜ್ಯದ ರಾಜಧಾನಿಗಳಾಗಿದ್ದವು. ಬಿದನೂರು ರಾಜ್ಯವು ಹೈದರಲಿಯಿಂದ ಮುರಿಯಲ್ಪಟ್ಟಿತು.

# ಬಯಲಾದ ಸಂಚು

## ೧. ಸೇಡು ತೀರಿಸದೆ ಬಿಡುವದಿಲ್ಲ

ಹೇಮಂತ ಋತುವು, ಸಹ್ಯಪರ್ವತದ ಅಡಿಯ ಪ್ರದೇಶ; ಎತ್ತೆತ್ತಲೂ ಹಿಮರಾಜನ ಅಧಿಕಾರ! ಮೂಡಲು ಕೆಂಪಾಯಿತು; ತಾರೆಗಳಡಗತೊಡಗಿದವು; ಅರುಣೋದಯವಾಯಿತು; ದಶದಿಕ್ಕುಗಳು ಪ್ರಕಾಶಮಾನವಾದವು. ಆದರೂ ಆ ಪ್ರದೇಶದಲ್ಲಿ ಇನ್ನೂ ಪ್ರಾಣಿಗಳ ಸುಳಿದಾಟವಿಲ್ಲ. ಹಕ್ಕಿಗಳು ಗೂಡುಗಳಿಂದ ಹೊರಬಂದು ನಾನಾದೆಸೆಗೆ ಹಾರಲೊಲ್ಲವು! ದನಕರುಗಳು ಹುಲ್ಲಿನ ಪ್ರದೇಶಕ್ಕೆ ಬರಲೊಲ್ಲವು! ಜನರು ಮನೆಗಳನ್ನು ಬಿಟ್ಟು ಹೊರಬೀಳಲೊಲ್ಲರು. ಹೊರಗೆ ಬಂದರೆ ಚಳಿಯ ಹೆದರಿಕೆ!!

ಆದರೆ ಈ ಪ್ರಪಂಚ ಅಸ್ಥಿರ; ಹೇಮಂತ ಸಾಮ್ರಾಜ್ಯಕ್ಕೂ ಅಳಿಗಾಲ ಬಂದಿತು. ಪ್ರಾಣಿಗಳ ಸಂಕಟಕ್ಕೆ ಪರಿಹಾರ ಒದಗಿತು. ಪ್ರಾಣಿಗಳು ಮುಸುಕಿನಲ್ಲಿಯೇ, ತಮ್ಮನ್ನು ಬಂಧನದಿಂದ ಬಿಡಿಸುವ ಭಾಸ್ಕರನ ಮಾರ್ಗಪ್ರತೀಕ್ಷೆಯನ್ನು ಮಾಡುತ್ತಿದ್ದವು. ಪರಾಧೀನರು ನಿರುಪಾಯರಾಗಿ ಸುಮ್ಮನಿದ್ದರೂ ತಮ್ಮ ಭಾಗ್ಯೋದಯವನ್ನು ಬಯಸಿ ಸಮಯವನ್ನು ಕಾಯುವದು ಸಹಜವಷ್ಟೆ! ಅಷ್ಟರಲ್ಲಿ ಮೂಡಿದ ಸೂರ್ಯನು ಭೂಮಿಯಲ್ಲಿ ತುಂಬಿದ್ದ ಹಿಮ-ತಮಗಳೊಡನೆ ಹೋರಾಡಿ, ಅವುಗಳನ್ನು ಹೊಡೆದೋಡಿಸಿದನು. ತನ್ನ ಕಿರಣಗಳನ್ನು ಸುತ್ತಲೂ ಹರಡಿದನು. ಪ್ರಾಣಿಗಳು ನಿಲಯಗಳಿಂದ ಹೊರಬಿದ್ದು ನಿತ್ಯ-ನಿಯಮಗಳಂತೆ ನಡೆಯತೊಡಗಿದವು.

ಗಿರಿಶಿಖರಗಳ ಮೇಲೆ ಹೊಂಬಣ್ಣದ ಕಿರಣಗಳು ಬಿದ್ದು ಅವು ಕಂಗೊಳಿಸುತ್ತಿದ್ದವು. ನೆರೆಯಲ್ಲಿರುವ ಇಕ್ಕೇರಿಪುರದ ಅರಮನೆ ಉಪ್ಪರಿಗೆಗಳೂ ಗುಡಿಗೋಪುರಗಳೂ ಹೊನ್ನೀರ ಮಿಂದಂತೆ ಮಿರಗುತ್ತಿದ್ದವು.

ಆಗ ಪುರದ ಮಹಾದ್ವಾರಗಳಿಂದ ದನಕರುಗಳು ಹೊರಬಿದ್ದವು. ಅವುಗಳೊಡನೆ ಒಕ್ಕಲಿಗರು ದೆಸೆದೆಸೆಗೆ ಹರಿದರು. ಮಾಗಿಬಂದ ಹೊಲಗಳಲ್ಲಿ ಜನರ ನಲುವಿನಾಟಕ್ಕೆ ಆರಂಭವಾಯಿತು. ಹೇರು ಹೊತ್ತ ಎತ್ತುಕುದುರೆಗಳು ಮಾರ್ಗವಿಡಿದು ನಡೆದವು. ಹೊರವಲಯದಲ್ಲಿ ಹೀಗಿದ್ದರೆ ನಗರದ ಬೀದಿಗಳಲ್ಲಿ ಬಾಲೆಯರು ಬಾಗಿಲು-ಹೊಸ್ತಿಲಗಳನ್ನು ತೊಳೆದು ರಂಗವಲ್ಲಿಗಳಿಂದ ಅಲಂಕರಿಸಿದರು. ಬಾಲಕರು ಬೀದಿಗೆ ಬಂದು ಬೆಳಗಿನ ನಗುಮೊಗದಿಂದ ನಲಿದರು. ದೇವಾಲಯಗಳು ಭಕ್ತವೃಂದದಿಂದ ಸಂದಣಿಗೊಂಡವು. ಬೊಗಸೆಗಣ್ಣಿನ ಸೊಗಸುಗಾರ್ತಿಯರು ಹೊಂಗಳಸದಂತಹ ಕೊಡಗಳನ್ನು ತಲೆಯ ಮೇಲೆ ಹೊತ್ತುಕೊಂಡು ನೀರ ತರಹತ್ತಿದರು. ಅಂಗಡಿಗಳು ತೆರೆದವು. ಫಲಪುಷ್ಪಗಳು ಬೈಲಿಗೆ ಬಂದವು. ರಾಜದೂತರು ರಾಜಕಾರ್ಯಗಳಲ್ಲಿ ತೊಡಗಿದರು. ಇವರೆಲ್ಲರಿಂದ ಪಟ್ಟಣದ ವಿಶಾಲವಾದ ಬೀದಿಗಳು ಜನನಿಬಿಡವಾದವು. ಸೌಂದರ್ಯದ ನಿಲಯವಾದ ಅರಮನೆಯ ಅಂದವನ್ನೇನು ವರ್ಣಿಸುವದು! ಬಣ್ಣಬಳಿದ ಗೋಡೆಗಳು ಎಳೆಬಿಸಿಲಲ್ಲಿ ಹೊಳೆಯುತ್ತಿದ್ದವು. ಗಿಡಬಳ್ಳಿಗಳ ತಳಿರುಗಳ ಸಂದುಗಳಿಂದ ಪಾರಾಗಿ ಬಂದ ಕಿರಣಗಳು ಗೋಡೆಗಳ ಮೇಲೆ ಬಿದ್ದು ಅವು ಚಿತ್ರರಂಜಿತವಾಗಿದ್ದವು. ಆ ಸೌಂದರ್ಯವನ್ನು ಸವಿಯುತ್ತ ಕರುಮಾಡುಗಳು ಮೊಗಸಾಲೆಗಳಲ್ಲಿಯೂ ಪ್ರಾಂಗಣಗಳಲ್ಲಿಯೂ ನರನಾರಿಯರು ಅರಮನೆಗೆ ಅಲಂಕಾರವಾಗಿ ಎಡೆಯಾಡುತ್ತಿದ್ದರು. ಅಲ್ಲೆಲ್ಲಿಯೂ ಸೊಬಗು-ಸೊಗಸುಗಳು! ಎಲ್ಲಿಯೂ ಉತ್ಸಾಹ-ಉಲ್ಹಾಸಗಳು!

ಇಂತಹ ಬೆಳಗಿನ ಚೆಂದದಲ್ಲಿಯೂ ಜಂಬೂರ ನಿವಾಸದ ಉಪ್ಪರಿಗೆಯ ಹಿಮ್ಮಗ್ಗಲಿನ ಮಲಗುಮನೆಯ ಬಾಗಿಲು ಇನ್ನೂ ತೆರೆದಿರಲಿಲ್ಲ. ಊಳಿಗದಾಳುಗಳು ಎರಡು ಸಲ ಬಂದು ದೂರದಿಂದಲೇ ನೋಡಿ ಮರಳಿದರು. ಬಳಿಕ ವಯಸ್ಸು ಹೋದ ದೊಡ್ಡ ಹೆಣ್ಣುಮಗಳೊಬ್ಬಳು ಮೇಲೆ ಬಂದಳು. ಹರವಾದ ಹಣೆ, ನೀಳವಾದ ಮೂಗು, ತಿಳಿಗೆಂಪು ಬಣ್ಣ, ಗೌರವದ ಉಡಿಗೆಗಳು ಗಂಭೀರಭಾವ ನೋಡುವವರಲ್ಲಿ ಆದರವನ್ನು ಹುಟ್ಟಿಸುತ್ತಿದ್ದವು. ಮೈಮೇಲೆ ಒಡವೆಗಳ ಗಡಣವಿಲ್ಲದಿದ್ದರೂ ಹೊತ್ತಿರುವ ಕುತನಿಯ ಶಾಲು, ಕಾಲಲ್ಲಿ ರೇಶಿಮೆ ಪಟ್ಟೆಯ ತಿಳುವಾದ ಜೋಡು, ಮನೆಯೊಡತಿಯೆಂಬದನ್ನು ಸೂಚಿಸುತ್ತಿದ್ದವು. ಬರಿದಾದ ಹಣೆಯೂ ಕಿವಿಮೂಗುಗಳಲ್ಲಿಯ ಅಲಂಕಾರವಿಲ್ಲದ

ಎಜ್ಜಗಳೂ ಕೆಲವು ದಿನಗಳ ಹಿಂದೆ ವೈಧವ್ಯ ಪ್ರಾಪ್ತವಾದುದನ್ನು ವ್ಯಕ್ತಪಡಿಸುತ್ತಿದ್ದವು. ಆ ತಾಯಿಯು ಸರಾಗವಾಗಿ ಬಾಗಿಲಿಗೆ ಬಂದಳು, ಆದರೆ.... 'ಯಾಕಪ್ಪ ಇನ್ನೂ ಏಳಲಿಲ್ಲ?' ಎನ್ನಬೇಕಾಗಿದ್ದ ನುಡಿ ಬಾಯಲ್ಲಿಯೇ ಉಳಿಯಿತು; ಒಳಗಿನವರು ಮಾತನಾಡುತ್ತಿದ್ದ ಕಠೋರ ನುಡಿ ಕಿವಿಗೆ ಬಿತ್ತು. ಬಾಗಿಲ ತಟ್ಟಲು ಬಂದ ಕೈ ಹಿಂದೆ ಸರಿಯಿತು. ತನ್ನ ಮಗನೊಡನೆ ಇನ್ನೊಬ್ಬರು ಮಾತಾಡುತ್ತಿರುವಂತೆ ತಿಳಿಯಿತು. ತಾನು ಅರಿಯದ ಅನಿಷ್ಟವಾದ ಸಂಚಿನ ಮಾತುಗಳವು. ಆ ತಾಯಿ ದಿಗಿಲಾಗಿ ನಿಂತಳು. ಪರರ ಮಾತನ್ನು ಹೊಂಚಿ ಕೇಳಬಾರದಾದರೂ ಗಾಬರಿಗೊಂಡ ಆಕೆಯ ಕಿವಿಗಳು ಅನಿವಾರ್ಯವಾಗಿ ಹೀಗೆ ಕೇಳಿದವು.

"ಏನನ್ನಾದರೂ ಮಾಡು; ಇನ್ನು ಸತ್ಯ-ಶೀಲಗಳ ಮಾತಿಲ್ಲ. ವೀರಭದ್ರನನ್ನು ಪಟ್ಟದಿಂದ ತಳ್ಳುವವರೆಗೆ ನನಗೆ ಸಮಾಧಾನವಿಲ್ಲ."

"ಹಾಗೆ ಹೇಳಿರಿ ಏನಾದರೂ ಮಾಡಬೇಕು. ವಂಚನೆ ಹೊಲ್ಲವೆಂದರೆ ನಡೆಯದು. ಸರಳ ಮಾರ್ಗದಿಂದ ಆದೀತೇ ಈ ಕಾರ್ಯ? ವಂಚನೆಯ ಮಾರ್ಗದಿಂದಲೇ ಈಗ ತಿಮ್ಮನಾಯಕನಲ್ಲಿ ಅರಸನ ಬಗೆಗೆ ದ್ವೇಷವನ್ನು ಹುಟ್ಟಿಸಲು ಸಾಧ್ಯವಾಯಿತು."

"ಅದೊಂದು ಮಹಾಸಾಧನೆ! ಇನ್ನಾರು ನಮ್ಮ ಪಕ್ಷಕ್ಕೆ ಬರಬಹುದು?"

"ರಾಮಣ್ಣ ಹೆಗ್ಗಡೆ, ಪರ್ವನಾಯಕ ಇವರು ಸುಲಭವಾಗಿ ನಮ್ಮ ತಂತ್ರಕ್ಕೆ ಒಳಗಾಗುವರು. ದುರ್ಗಪತಿ ವೀರ ಜಗಣ್ಣನನ್ನೂ ಸೆಳೆದುಕೊಳ್ಳಬಹುದು. ಅವನು ತಿಮ್ಮಣ್ಣನ ಸ್ನೇಹಿತನು; ಮೇಲಾಗಿ ಲೋಭಿಯಾದ ಆತನು ಆಮಿಷಕ್ಕೆ ಒಳಗಾಗುವನು. ವೀರಬಡೆಯರಿಗೆ ಸಿಂಹಾಸನವನ್ನು ಒದಗಿಸುವೆವೆಂಬ ನಮ್ಮ ಬಹಿರಂಗದ ಕಾರಣವಂತೂ ಇದ್ದೇ ಇದೆ. ಆದರೂ ಶರಜಣ್ಣ, ಸೇನಾಪತಿ ಲಿಂಗರಾಜ, ಮಂತ್ರಿ ಶಂಕರನಾರಾಯಣ ಇವರಾರೂ ನಮ್ಮ ಕಡೆಗೆ ಬಾರರು. ಇವರು ವೀರಭದ್ರ ರಾಜನಿಗಾಗಿ ಪ್ರಾಣವನ್ನಾದರೂ ಕೊಡಲು ಸಿದ್ಧರಾಗಿದ್ದಾರೆ."

"ಈ ಬುದ್ಧಿಗೇಡಿಗಳಿಗೆ ಇಕ್ಕೇರಿಯ ನಾಯಕರ ಸಿಂಹಾಸನಕ್ಕೆ ವೀರಬಡೆಯರೇ ನಿಜವಾದ ಹಕ್ಕುದಾರರೆಂಬ ಮಾತು ಹೇಗೆ ತಿಳಿಯಬೇಕು? ನನ್ನ ಅವಮಾನದಲ್ಲಿಯೇ ಅವರು ಸಂತೋಷಪಡುತ್ತಿದ್ದಾರೆ. ವೀರಬಡೆಯರನ್ನು

ಒಮ್ಮೆ ಸಿಂಹಾಸನಕ್ಕೆ ತಂದರೆ, ಅಧಿಕಾರ ಸೂತ್ರಗಳು ನಮ್ಮ ಕೈಯಲ್ಲಿ ಬರುವವು. ಆಗ ಇವರೆಲ್ಲರಿಗೆ ಬುದ್ಧಿಯನ್ನು ಕಲಿಸಲಿಕ್ಕಾಗುವದು."

"ತಮ್ಮ ಹೆಸರಿನಿಂದ ಈ ಕ್ರಾಂತಿ ನಡೆಯಲು ವೀರಒಡೆಯರು ಒಪ್ಪಿದರೆ?"

"ಒಪ್ಪದೆ ಏನು? ಹುಟ್ಟಾ ರೋಗಿಯಾದರೇನು? ಎಪ್ಪತ್ತು ವರ್ಷದ ವೃದ್ಧರಾದರೇನು? ರಾಜವೈಭವ ಯಾರಿಗೆ ಬೇಡ? ಅದು ಸಾಯುತ್ತಿರುವಾಗಲೂ ಬೇಕು. ಸತ್ತ ಮೇಲೆಯೂ ಬೇಕು."

"ಸತ್ತ ಮೇಲೆ ಸಿಂಹಾಸನವನ್ನೇರಿಸಲು ಬಾರದು. ಇರುವಷ್ಟರಲ್ಲಿಯೇ ನಮ್ಮ ಕಾರ್ಯವಾಗಬೇಕಷ್ಟೇ! "

"ನಿಜ ಪುಟ್ಟಣ್ಣ, ನಾನೂ ಅತುರದಿಂದ ತಳಮಳಿಸುತ್ತಿದ್ದೇನೆ. ವೀರ ಒಡೆಯರ ಸುತ್ತಲೂ ಯಮದೂತರು ಸುಳಿದಾಡುತ್ತಿದ್ದಾರೆ ಅವರನ್ನು ಮುಂದುಮಾಡಿ ನಾವು ರಾಜ್ಯಸೂತ್ರಗಳನ್ನು ಕೈವಶ ಮಾಡಿಕೊಂಡ ಬಳಿಕ, ಅವರು ಸತ್ತರೂ ಸರಿಯೇ! ಮುಂದಿನ ವಾರದಲ್ಲಿ ವೀರಭದ್ರನು ತುಂಗಾ ಸ್ನಾನಕ್ಕಾಗಿ ತೀರ್ಥರಾಜಪುರಕ್ಕೆ ಹೋಗಿ,-ಮಹಾಶಿವರಾತ್ರಿಯ ಪರ್ವದವರೆಗೆ ಒಂದು ತಿಂಗಳು ನಂದನಪುರದಲ್ಲಿ ಬೀಡಾರ ಮಾಡುವನು........"

"ಹಾಗಿದ್ದರೆ ಅದೊಂದು ನಮಗೆ ಅನುಕೂಲವೇ ಸೈ!"

"........ಇದೇ ಸಂದಿಯಲ್ಲಿ ನಮ್ಮ ಕಾರ್ಯ ಸಾಧಿಸಬೇಕು. ಅರಸನೊಡನೆ ಯಾರು ಯಾರು ಹೋಗುವರೋ ನೋಡಬೇಕು."

"ನಮ್ಮ ಪಕ್ಷದವರೆಲ್ಲ ಆಗ ಹೋಗದೆ ಹಿಂದೆ ಉಳಿಯುವಂತೆ ತಂತ್ರವನ್ನು ರಚಿಸಬೇಕು. ರಾಮ ಹೆಗ್ಗಡೆ, ಪರ್ವನಾಯಕರ ಆಧೀನದಲ್ಲಿ ಇನ್ನೂರು ಜನ ಭಟರಿದ್ದಾರೆ, ಮಲೆಯ ಕೋಟೆಗಳ ಅಧಿಪತಿಯಾದ ತಿಮ್ಮನಾಯಕನ ಆಧೀನದಲ್ಲಿ ಬೇಡರ ಪಡೆಯೇ ಇದೆ. ವೀರಭದ್ರರಾಜನು ರಾಜಧಾನಿಯ ರಕ್ಷಣೆಗೆ ತನ್ನ ನಂಬಿಗೆಯವನನ್ನು ನೇಮಿಸಿದರೂ, ಇವರೆಲ್ಲರ ಬಲದಿಂದ ಅವನ ದಳವನ್ನು ಹೊಡೆದೋಡಿಸಬಹುದು."

"ಯುಕ್ತಿವಂತನೆಂದರೆ ನೀನೇ ಪುಟ್ಟಣ್ಣ! ಏನಾದರು ಮಾಡು; ಧರ್ಮಾಧರ್ಮಗಳ ಮಾತೇ ಈಗ ಬೇಡ! ನಮ್ಮ ಕೈ ಮೇಲಾದರೆ ನಾನು ಮಂತ್ರಿ! ನೀನು ಸೇನಾಪತಿ! ನಾವೇ ರಾಜ! ಒಮ್ಮೆ ವೀರಭದ್ರರಾಜನ ನಾಶವಾದರೆ ಸಾಕು!"

ಇನ್ನು ತಡೆಯುವದಾಗಲಿಲ್ಲ ಆ ಹೊರಗೆ ನಿಂತು ಕೇಳುತ್ತಿದ್ದ ಸುವರ್ಣಮ್ಮತಾಯಿಗೆ ! ಇಷ್ಟರಲ್ಲಿ ಭಯ-ಕ್ರೋಧಗಳಿಂದ ನಡುಗುತ್ತಿದ್ದಳಾಕೆ ! ಬಲವಾಗಿ ಬಾಗಿಲ ತಟ್ಟಿದಳು ಒಳಗೆ ಮಾತು ನಿಂತವು.

"ಸದಾಶಿವಾ......."ಕೂಗಿದಳು.

ಒಳಗಿನವರಿಗೆ ದನಿಯು ಗುರುತು ಹತ್ತಿತು. ಪುಟ್ಟಣ್ಣ ಬಂದು ಬಾಗಿಲ ತೆಗೆದು ಕೈಮುಗಿಯುತ್ತ ಓರೆಯಾಗಿ ಹೊರಗೆ ಹೋದನು. ತಾಯಿ, ಮಗನ ಮಂಚದ ಮುಂದೆ ಬಂದು ನಿಂತಳು. ಸದಾಶಿವನಾಯಕನು ಕೆಂಗಣ್ಣಿನಿಂದ ನೋಡುತ್ತಿದನು.

"ಇದೇನಪ್ಪ ನಿಮ್ಮ ದುರಾಲೋಚನೆ ? ಇನ್ನೂ ಎದ್ದು ಬರಲಿಲ್ಲವೆಂದು ನೋಡ ಬಂದರೆ ಕೇಳಬಾರದುದನ್ನು ಕೇಳಿದೆನಲ್ಲ !"

"ಮುಂದೆ ನೋಡಬಾರದುದನ್ನು ನೋಡುವಿರಂತೆ !"

ತಾಯಿಗೆ ದುಃಖ ಒತ್ತರಿಸಿ ಬಂದಿತು; ಕಣ್ಣೀರು ಸುರಿಯಿತು; ಕ್ಷಣ ಹೊತ್ತು ಮಾತು ಬಾರದಾಯಿತು. ಬಳಿಕ ಕಣ್ಣೊರಿಸಿಕೊಂಡು ನುಡಿದಳು.

"ಬೇಡಪ್ಪ ಆಳಿದ ಹಿರಿಯರ ಶ್ರಮದಿಂದ–ಅವರಪುಣ್ಯದಿಂದ-ರಾಜ್ಯದಲ್ಲಿ ಸುಖಶಾಂತಿ ನೆಲಸಿವೆ. ಅದನ್ನು ಕದಡಬೇಡ. ಬಂಧು-ಬಳಗ, ಪಾಪಪುಣ್ಯಗಳ ವಿಚಾರಮಾಡು. ವೀರಭದ್ರನು ನಿನ್ನ ಕೈಹಿಡಿದವಳ ಅಣ್ಣ, ನಿನ್ನ ಸೋದರಮಾವನ ಮಗ; ನಿನಗೆ ಅನ್ಯನೇ?"

"ನಿಮಗೂ ಸೋದರಳಿಯ, ಆ ಎಲ್ಲ ಮರುಕವನ್ನು ನೀವೇ ತೋರಿರಿ."

"ಎಂದಿನಂತೆ ನಿನ್ನ ಹಟವನ್ನೇ ಸಾಧಿಸಬೇಡಪ್ಪ ಮಗು! ಈ ಅನ್ಯಾಯದ ವಿಚಾರ ಬೇಡ!"

"ವೀರಭದ್ರನು ಮಾಡಿದ್ದು ನ್ಯಾಯವೇ ? ಅದರಲ್ಲಿ ನನಗೆ ಅಪಮಾನವಾಗಲಿಲ್ಲವೇ?"

"ಅಪಮಾನವೇಕಾಗಬೇಕು? ನಿನ್ನ ಅಧಿಕಾರ ನಿನಗಿದೆ ಅದನ್ನು ಕಡಿಮೆ ಮಾಡಿಲ್ಲ. ಅನುಭವದಿಂದ ಯೋಗ್ಯತೆ ಪಡೆದ ಹಿರಿಯನೊಬ್ಬನಿಗೆ ಮಂತ್ರಿಪದ ಕೊಟ್ಟರೆ ತಪ್ಪೇನು? ಪ್ರಜಾಭಿಪ್ರಾಯವು ಅದಕ್ಕೆ ಅನುಕೂಲವಾಗಿತ್ತಲ್ಲವೇ? ರಾಜಪ್ರಜರಿಗೆ ಅಪಾಯಕರವಾಗಿರುವ ನಿನ್ನ ಆಲೋಚನೆಯು ಪಾಪಕರವು!"

"ರಾಜಕೀಯದಲ್ಲಿ ಪಾಪ-ಪುಣ್ಯಗಳಿಗೆ ಪ್ರವೇಶವಿಲ್ಲ. ಪ್ರಜಾಭಿಪ್ರಾಯವಂತೆ! ತಲೆ ಮಾಸಿದ ಪೋಕರಿಗಳ ಮಾತೇ ಪ್ರಜಾಭಿಪ್ರಾಯ ಅವನಿಗೆ!"

"ಸುವರ್ಣಮ್ಮನ ಮನದಲ್ಲಿ ಭವಿಷತ್ತಿನ ಭೀಕರ ಚಿತ್ರ ಮೂಡಿತು. ಮಗನ ಮನಸ್ಸು ಬದಲಾಗದು. ಅಳುವು ಒತ್ತರಿಸಿತು. ಗಳಗಳನೆ ಅತ್ತಳು."

"ಅಳಬಹುದು; ಅಳುವದಕ್ಕೇನು ಸಾಹಸಬೇಕೇ? ಇಕ್ಕೇರಿಯ ರಾಜ್ಯವು ಘನತೆಗೇರಿದು ಜಂಬೂರ ವಿರೂಪಾಕ್ಷಿರಾಯರ ಚಾತುರ್ಯದಿಂದ. ಆ ನಿನ್ನ ಪತಿಯ ಮಂತ್ರಿ ಪದವು ಅವರ ಮಗನಿಗೆ ಬೇಡವೇ? ನನ್ನಲ್ಲಾದರೂ ಯಾವ ದೋಷವನ್ನು ಕಂಡರು. ನಿನ್ನ ಪತಿ ಪಡೆದು ನಿನ್ನ ಉದರದಿಂದ ಹುಟ್ಟಿದ ನನಗೆ ಆಗದಿದ್ದುದಕ್ಕೆ ನಿಮಗೆ ಅಳುವಿಲ್ಲ! ಕಣ್ಣಲ್ಲಿ ನೀರಿಲ್ಲ! ಈಗ ಮಾತ್ರ ಹೊಳೆ ಹರಿಯುತ್ತದೆ. ನೀನೂ ನಿನ್ನ ಸೊಸೆಯೂ ತವರಿನ ಚಿಂತೆ ಮಾಡುವದಾದರೆ ಮಾಡಿರಿ. ನಾನು ಮಾತ್ರ ನನಗೆ ಹಿತವಾಗಲಿ ಅಹಿತವಾಗಲಿ, ಜನರು ಹೊಗಳಲಿ ತೆಗಳಲಿ. ನನ್ನ ಅಪಮಾನದ ಸೇಡು ತೀರಿಸದೆ ಬಿಡುವದಿಲ್ಲ"

ಮೈ ಮೇಲಿನ ಬನಾತಿನ ಶಾಲನ್ನು ಬಿಸುಟಿ ಆವೇಶದಿಂದ ಎದ್ದನು.

"ದುಡುಕಬೇಡ ಮಗನೆ, ನಿನ್ನ ಕಾಲು ಬೀಳುತ್ತೇನೆ....."

ಸುವರ್ಣಮ್ಮ ಅಡ್ಡ ಬೀಳುತ್ತಿದ್ದಳು. ಅದನ್ನು ಗಣಿಸದೆ ಸದಾಶಿವ ನಾಯಕನು ಓರೆಯಾಗಿ ದಾಟಿ ಹೋಗಿ ಬಿಟ್ಟನು. ಸುವರ್ಣಮ್ಮ ಬಹಳ ಹೊತ್ತು ಅಲ್ಲಿಯೇ ಕುಸಿದಿದ್ದಳು.... 'ತನ್ನ ತಂದೆಯೂ ಪತಿಯೂ ಕೂಡಿ ಬೆಳಸಿ ನಿಷ್ಕಂಟಕಗೊಳಿಸಿದ ಸುಖಸಮೃದ್ಧಿಯ ರಾಜ್ಯವೊಂದು ಕಡೆ! ಗರ್ವಿಷ್ಠನೂ ಹಟಮಾರಿಯೂ ಆಗಿದ್ದರೂ ತನಗೆ ಒಂದೇ ಒಂದು ಬೆಳಕಾಗಿದ್ದ ಮಗನೊಂದು ಕಡೆ! ಈ ಸಂಚು ಮುಂದುವರಿದರೆ ಆಗುವ ಅನರ್ಥ ಅಷ್ಟಿಷ್ಟಲ್ಲ! ಈಗ ತಾನೇನು ಮಾಡಬೇಕು? ತನ್ನ ಧರ್ಮವೇನು?....' ಆಲೋಚನೆ ಮಾಡುತ್ತಿದ್ದಂತೆ ತಲೆಸುತ್ತಿ ಕತ್ತಲೆ ಕವಿದಂತಾಯಿತು. ಆದರೆ ಮುಂದೆ ತಾನು ಯಾವದನ್ನೂ ಮಾಡದಂತೆ ತನ್ನ ಮಗನಿಂದಲೇ ಸ್ಥಾನಬದ್ಧಳಾಗುವದನ್ನು ಆ ತಾಯಿ ಆಗ ಅರಿಯಲಿಲ್ಲ.

ಅಂದು ಸಂಜೆಯೊಳಗಾಗಿ ಸದಾಶಿವನಾಯಕನು ತನ್ನ ಮನೆಯ ಊಳಿಗದವರನ್ನೆಲ್ಲ ಬೇರೆ ಕಡೆಗೆ ಕಳುಹಿದನು. ಏನೂ ಅರಿಯದ ತೀರ ಅಪರಿಚಿತರಾದ ಹಳ್ಳಿಯ ಒಂದೆರಡು ಆಳುಗಳನ್ನು ಒಳಗಿನವರ ಸೇವೆಗೆ ನಿಯಮಿಸಿದನು. ತನ್ನ ಮಂದಿರದಿಂದ ಯಾವ ವ್ಯಕ್ತಿಯಾಗಲಿ, ಯಾವ

ಸುದ್ದಿಯಾಗಲಿ ಹೊರಗೆ ಹೋಗದಂತೆ, ಹಾಗೂ ಹೊರಗಿನಿಂದ ಒಳಗೆ ಬಾರದಂತೆ ಕಟ್ಟಾಜ್ಞೆ ಮಾಡಿ, ಹೆಚ್ಚು ಸಂಬಳದ ಬಲವಾದ ಭಟರನ್ನು ಹೊರಗಡೆಗೆ ಕಾವಲಿಟ್ಟನು.

ಸುವರ್ಣಮ್ಮ ನೆಲ್ಲ್ಹಿಡಿದಳು. ಪತ್ನಿ ವೀರಮ್ಮ ಪತಿಯನ್ನು ಸಮಾಧಾನಪಡಿಸಲು ಯತ್ನಿಸುತ್ತಲೇ ಇದ್ದಳು.

—

## ೨. ಈ ಅಪಮಾನದ ಸೇಡು

ಕೆಳದಿಯ ರಾಜ್ಯ ಐದನೆಯ ಅರಸು ರಾಮರಾಜನಾಯಕನು ತನ್ನ ಅವಸಾನ ಕಾಲದಲ್ಲಿ ಆಡಳಿತದ ಮುಖ್ಯಾಧಿಕಾರಿಗಳನ್ನೂ ನಾಗರಿಕ-ಮನ್ನೆಯರನ್ನು ಕರೆದು ಹೇಳಿದನು:

"ನನ್ನ ಮಕ್ಕಳು ರೋಗಿಗಳು ಬುದ್ಧಿಹೀನರು ಆಗಿರುವರು. ನನ್ನ ತರುವಾಯ ಸಮರ್ಥನಾದ ನನ್ನ ತಮ್ಮ ವೆಂಕಟರಾಯನೇ ಅರಸಾಗಬೇಕು. ಅವನ ಬಳಿಕಾದರೂ ಅವನ ವಂಶದವರೇ ರಾಜರಾಗಬೇಕು."

ಹೀಗೆ ವಿಧಿಸಿ ಆತನು ಅರಸೊತ್ತಿಗೆಯನ್ನು ವೆಂಕಟನಾಯಕನ ಪದರಿಗೆ ಹಾಕಿದನು. ಮುಂದೆ ವೆಂಕಟನಾಯಕನೇ ಅರಸಾದನು. ಗತಿಸಿದ ರಾಜನಿಗೆ ವೀರ ಒಡೆಯ, ಬಸವಲಿಂಗನಾಯಕ ಎಂಬಿಬ್ಬರು ಮಕ್ಕಳು. ವೀರ ಒಡೆಯ ಜನ್ಮರೋಗಿ; ಕುಷ್ಟರೋಗದಿಂದ ಸಾಯದೆ ಬದುಕದೆ ಇದ್ದನು; ರಾಜ್ಯವಾಳಲು ತೀರ ಅಸಮರ್ಥನು. ಆದರೆ ಅಧಿಕಾರ-ವೈಭವಗಳು ಯಾರಿಗೆ ಬೇಡ ? ತನ್ನ ಸಿಂಹಾಸನದ ಬಾಧ್ಯತೆಗಾಗಿ ಹಗಲಿರುಳು ಚಿಂತಿಸುತ್ತಿದ್ದನು. ಮಾಡುವದೇನು ? ಶೂರನೂ ಜನಪ್ರಿಯನೂ ಆದ ಚಿಗಪ್ಪ ವೆಂಕಟನಾಯಕನ ಮುಂದೆ ಅವನ ಆಟವೆಲ್ಲಿ ನಡೆಯಬೇಕು ? ಅದರಿಂದ ನಿರುಪಾಯನಾಗಿ ತನ್ನ ಆಯುಷ್ಯದಲ್ಲೆಲ್ಲ ತಳಮಳಿಸುತ್ತಲೇ ಇದ್ದನು. ಬಸವಲಿಂಗನಾಯಕ ಅರೆಹುಚ್ಚ ! ಅವನಿಗೆ ಉಂಡುಟ್ಟು ಅಡ್ಡಾಡಿದ್ದೇ ಸುಖವು ! ಅವನು ಒಮ್ಮೆ ರಾಣೀವಾಸದಲ್ಲಿ, ಒಮ್ಮೆ ಓಲಗದಲ್ಲಿ, ಒಮ್ಮೆ ಒಂದಾನೊಂದು ವ್ಯವಸಾಯದಲ್ಲಿ, ಒಮ್ಮೆ ಸೈನಿಕನಾಗಿ ಸೇನೆಯಲ್ಲಿ ಇರುತ್ತಿದ್ದನು. ಅವನಿಗೆ ರಾಜ್ಯಾಧಿಕಾರದ ತೊಡಕೇ ಬೇಡ ! ಅವನ ವರ್ತನೆಯಿಂದ ಯಾರಿಗೂ ತೊಂದರೆಯಿಲ್ಲ. ಯಾರೂ ಅವನನ್ನು ತಡೆಯುತ್ತಿರಲಿಲ್ಲ.

ವೆಂಕಟನಾಯಕನು ಅಣ್ಣನ ತರುವಾಯ ಕ್ರಿ. ಶ. 1583 ರಲ್ಲಿ ಪಟ್ಟವೇರಿ ಕ್ರಿ. ಶ. 1630ರ ವರೆಗೆ 47 ವರ್ಷ ಒಳ್ಳೆಯ ಘನತೆಯಿಂದ ರಾಜ್ಯವಾಳಿದನು. ವಿಜಯನಗರ ಸಾಮ್ರಾಜ್ಯವು ಅಳಿದ ನಂತರ ಅದರ ಪಾಳೆಯಗಾರರು ತಮ್ಮ ತಮ್ಮಷ್ಟಕ್ಕೆ ಸ್ವತಂತ್ರರಾಗಿದ್ದರು. ಅವರಲ್ಲಿ ವೆಂಕಟನಾಯಕನು ಪ್ರಬಲನಾಗಿ ತನ್ನ ಸುತ್ತಲಿನ ಪಾಳಯಗಾರ ನಾಯಕರನ್ನು ಗೆದ್ದು ತನ್ನ ರಾಜ್ಯವನ್ನು ಬೆಳೆಸಿದ್ದನು. ವೆಂಕಟನಾಯಕನ ಸೈನ್ಯವೆಂದರೆ ದಕ್ಷಿಣದ ಬಾದಶಹರಿಗೆ ಸಹ ಭಯ ! ವಿಜಾಪುರ ಬಾದಶಹನ ವೀರ ಸರದಾರರು ಇಕ್ಕೇರಿ ರಾಜ್ಯದ ಮೇಲೆ ದಾಳಿಮಾಡಿ ಈ ನಾಯಕನಿಂದ ಮುಳಗು ನೀರು ಕಂಡಿದ್ದರು. ಗೋವೆಯ ಪೋರ್ತುಗೀಜರು ಹೆದರಿ ಸರಿದಿದ್ದರು; ಅವರು ಕಪ್ಪುಗಾಣಿಕೆ ಕೊಟ್ಟು ವ್ಯಾಪಾರದ ಅನುಕೂಲತೆ ಪಡೆದಿದ್ದರು.

ವೆಂಕಟನಾಯಕನಿಗೆ ಸುವರ್ಣದೇವಿಯೆಂಬ ಸುಶೀಲೆಯಾದ ಮಗಳಿದ್ದಳು. (ಕೆಳದಿ ನೃಪವಿಜಯದಲ್ಲಿ ಈಕೆಯ ಹೆಸರು ಹಿರಿಯಮ್ಮ ಎಂದು ಹೇಳಿದೆ) ಇವಳನ್ನು ಜಂಬೂರ ಒಡೆಯರ ಮಗನಾದ ವಿರೂಪಾಕ್ಷರಾಯನಿಗೆ ಕೊಟ್ಟಿತ್ತು. ವಿರೂಪಾಕ್ಷರಾಯನು ಒಳ್ಳೇ ಬುದ್ಧಿವಂತನು. ಈತನ ಸೌಜನ್ಯ ಚಾತುರ್ಯಗಳನ್ನು ಮೆಚ್ಚಿ, ಅರಸನು ಇವನನ್ನು ತನ್ನ ಮುಖ್ಯ ಮಂತ್ರಿಯನ್ನಾಗಿ ಮಾಡಿಕೊಂಡಿದ್ದನು. ವಿರೂಪಾಕ್ಷರಾಯನು ನಾಯಕನಿಗೂ ಪ್ರಜೆಗಳಿಗೂ ಹಿತವಾಗುವಂತೆ ಆಡಳಿತೆಯನ್ನು ನಡೆಯಿಸಿ ಕೀರ್ತಿ ಪಡೆದನು. ಈ ದಂಪತಿಗಳ ಮಗನೇ ಸದಾಶಿವನು.

ವೆಂಕಟನಾಯಕನ ಮಗ ಭದ್ರನಾಯಕನು ತಂದೆಯಿರುವಾಗಲೇ ತೀರಿಕೊಂಡನು. ಈ ಪುತ್ರಶೋಕದಿಂದಲೇ 47 ವರ್ಷ ರಾಜ್ಯವಾಳಿದ ರಣಧೀರ ವೆಂಕಟನಾಯಕನು ಮರಣಹೊಂದಿದನು. ಇವನ ತರುವಾಯ ಮೊಮ್ಮಗ-ಭದ್ರನಾಯಕನ ಮಗ ವೀರಭದ್ರನಾಯಕನು ಸಿಂಹಾಸನವನ್ನೇರಿದನು. ವೀರಭದ್ರನ ತಂಗಿಯಾದ ವೀರಾದೇವಿಯನ್ನು ಸದಾಶಿವನಿಗೆ ಕೊಟ್ಟಿತ್ತು. ಅರ್ಥಾತ್ ಸದಾಶಿವನು ವೀರಭದ್ರನ ಭಾವ (ತಂಗಿಯ ಗಂಡ)ನು; ಅವನ ಸೋದರತ್ತೆಯ ಮಗನು

ವೆಂಕಟನಾಯಕನು ತೀರಿದ ಒಂದೇ ಒಂದು ವರ್ಷದೊಳಗಾಗಿ ರಾಜಪ್ರಜಾಮಾನ್ಯನಾದ ವಿರೂಪಾಕ್ಷರಾಯನೂ ನಿಧನಹೊಂದಿದನು. ಆತನ

ವಿಯೋಗದಿಂದ ಸರ್ವರಿಗೂ ದುಃಖವಾಗಿತ್ತು. ಆತನ ಮಹತ್ವದ ಸುಧಾರಣೆಗಳನ್ನು ಮುಂದೆ ಸಾಗಿಸುವವನು ಯಾವನು? ಯಾರಿಗೆ ಮಂತ್ರಿಪದ ದೊರೆಯುಬಹುದು? ಎಂಬ ಬಗೆಗೆ ರಾಜ್ಯಾಧಿಕಾರಿಗಳಲ್ಲಿ ಊಹಾಪೋಹೆಗಳು ನಡೆದಿದ್ದವು.

ಮಹತ್ವಾಕಾಂಕ್ಷಿಯಾದ ಸದಾಶಿವನು ತನ್ನ ತಂದೆಯ ಅಧಿಕಾರ ತನಗೇ ದೊರೆಯುಬೇಕೆಂದು ಹಾರೈಸಿಕೊಂಡಿದ್ದನು. ಸಹಜವಾಗಿ ಹಾಗೆಯೇ ಆಗುವದೆಂದೂ ನಂಬಿದ್ದನು. ಇವನು ತುಂಬಾ ಅಭಿಮಾನಿ-ದುರಭಿಮಾನಿ; ಗರ್ವಿಷ್ಟನೂ-ಹಟಮಾರಿಯೂ ಕೂಡ ಆಗಿದ್ದನು. ಇವನಿಂದ ತಮ್ಮ ಬೇಳೆ ಬೇಯಿಸಿಕೊಳ್ಳುವ ಧೂರ್ತರೂ ಮುಖಸ್ತುತಿಯುವರೂ ಇವನ ಗೆಳೆಯರು; ಉಳಿದ ಎಲ್ಲರ ಪ್ರೀತಿಯಿಂದಲೂ ದೂರ ಇದ್ದನು. ಪರಿವಾರದವರೆಲ್ಲ ಬೇಸತ್ತು ಹೋಗಿದ್ದರು. ಓಲಗದಲ್ಲಿ ಯಾರೂ ಇವನನ್ನು ಸೇರುತ್ತಿರಲಿಲ್ಲ. ಪ್ರತ್ಯಕ್ಷ ತಂದೆಯು ಕೂಡ ಮಗನ ಅವಗುಣಗಳಿಗಾಗಿ ಬೇಸತ್ತು ಹೋಗಿದ್ದನು. ವೆಂಕಟನಾಯಕನು ವಿರೂಪಾಕ್ಷರಾಯನ ಮೇಲಿನ ತನ್ನ ಒಲುಮೆಗಾಗಿಯೇ ಸದಾಶಿವನನ್ನು ಸರದಾರನನ್ನಾಗಿ ಮಾಡಿ ಮೊಮ್ಮಗಳನ್ನು (ವೀರಭದ್ರ ನಾಯಕನ ತಂಗಿಯನ್ನು) ಕೊಟ್ಟು ಮದುವೆ ಮಾಡಿದ್ದನು. ಈ ಕಾರಣದಿಂದ ಇವನಿಗೆ ರಾಜಾಧಿಕರಣದ ಸಂಬಂಧವಿತ್ತು. ತಂದೆಯಂತೆ ತಾನೂ ಇಕ್ಕೇರಿಯಲ್ಲಿಯೇ ನಿಂತು ಜಂಬೂರ ಪಾಳೆಯದ ಆಡಳಿತೆಯನ್ನು ನೋಡಿಕೊಳ್ಳುವವನಾದನು. ವಿರೂಪಾಕ್ಷರಾಯನು ಇಕ್ಕೇರಿಯಲ್ಲಿ 'ಜಂಬೂರ ನಿವಾಸ'ವೆಂಬ ಮಂದಿರವನ್ನು ಕಟ್ಟಿಸಿದ್ದನು.

ತನ್ನ ಸೊಕ್ಕಿನ ನಡತೆಯಿಂದ ರಾಜ್ಯದ ಮುಖ್ಯ ಮನ್ನೆಯರ ದ್ವೇಷವನ್ನು ಕಟ್ಟಿಕೊಂಡಿದ್ದ ಸದಾಶಿವನು ರಾಜ್ಯದ ಮಂತ್ರಿಯಾದರೆ ರಾಜ್ಯದಲ್ಲಿ ಅಶಾಂತಿಯುಂಟಾಗುವದೆಂಬದನ್ನು ಜಾಣನಾದ ವೀರಭದ್ರನು ಅರಿತುಕೊಂಡಿದ್ದನು. ಸದಾಶಿವನು ತನ್ನ ಭಾವ-ಮೈದುನನೆಂಬ ಕಾರಣದಿಂದ ಅವನಿಗೆ ಮಂತ್ರಿಪದವನ್ನು ಕೊಟ್ಟು ರಾಜ್ಯಕ್ಕೆ ಕೇಡು ಮಾಡಿಕೊಳ್ಳಲು ಅವನ ಮನಸ್ಸು ಹೇಗೆ ಒಪ್ಪೀತು? ವಿರೂಪಾಕ್ಷರಾಯನ ಸ್ಥಳದಲ್ಲಿ, ಬುದ್ಧಿಶಾಲಿಯೂ ವಿಶ್ವಾಸಿಕನೂ ಆದ, ಹಾಗು ಇದುವರೆಗೆ ಪ್ರಧಾನ ಕರಣಿಕ, ಕಂದಾಯದ ಅಧಿಕಾರಿ, ಸಮುಖದ ಕಾರ್ಯದರ್ಶಿ ಆಗಿ ಬಹುಮುಖದ ಸೇವೆಸಲ್ಲಿಸುತ್ತ ಬಂದ ಶಂಕರನಾರಾಯಣನೇ ಸಚಿವನಾಗಲು ಯೋಗ್ಯನೆಂದು

ಆಪ್ತ ಅಧಿಕಾರಿಗಳೊಂದಿಗೆ ಆಲೋಚಿಸಿ ಒಳಗೊಳಗೆ ಗೊತ್ತು ಮಾಡಿಕೊಂಡಿದ್ದನು. ಬಹುಜನರಿಗೆ ಅರಸನು ತನ್ನ ಭಾವನನ್ನೇ ಮಂತ್ರಿಯನ್ನಾಗಿ ಮಾಡಿಕೊಳ್ಳುವನೆಂದು ಕಲ್ಪನೆಯಾಗಿತ್ತು ಅಂತೆಯೇ ಸದಾಶಿವನನ್ನು ಆತನ ಗೆಳೆಯರು ಒಳಿತಾಗಿ ಗೌರವಿಸತೊಡಗಿದ್ದರು. ಆತನಿಂದ ತಮಗೆಬೇಕಾದ ಲಾಭಗಳ ಆಶ್ವಾಸನ ಪಡೆಯುತೊಡಗಿದ್ದರು.

ಹೀಗಿರಲು ಹೊಸ ಮಂತ್ರಿಯ ನೇಮಕದ ದಿನ ಒದಗಿತು. ಸಭೆಯು ಸಿದ್ಧತೆಯಾಯಿತು. ಪಾಳೆಯಗಾರರೂ ಮನ್ನೆಯರೂ ಆತುರ-ಕಾತುರಗಳಿಂದ ಸಭಾಮಂದಿರದಲ್ಲಿ ಸೇರಿದ್ದರು.

ಸದಾಶಿವನು ತನ್ನನ್ನು ಸೇರದ ಜನರ ಕೋಡು ಮುರಿಯುವ ವಿಚಾರ ಮಾಡುತ್ತ, ಇಂದಿನಿಂದ ತಾನು ರಾಜ್ಯದ ಮುಖ್ಯ ಮಂತ್ರಿಯಾಗತಕ್ಕವನಾದ್ದರಿಂದ ಈಗ ಸಭಾಸದರೆಲ್ಲರು ತನ್ನನ್ನು ವಿಶೇಷ ಗೌರವದಿಂದ ಕಾಣುವರೆಂಬ ಕನಸು ಕಾಣುತ್ತ ಸಭಾಲಯವನ್ನು ಪ್ರವೇಶಿಸಿದನು. ಅವನು ನೆನೆಸಿದಂತೆ ಯಾರೂ ಎದ್ದು ಮನ್ನಣೆ ಮಾಡಲಿಲ್ಲ. ಬಹುಜನರು ಶೂನ್ಯ ದೃಷ್ಟಿಯಿಂದ ಒಮ್ಮೆ ನೋಡಿದರು ಮಾತ್ರ. ಕೆಲವರಂತೂ ನಿಟ್ಟುಸಿರೆಳೆದರು. ಸದಾಶಿವನ ಎದೆಗೆ ಮೆತ್ತಗಿನ ಪೆಚ್ಚಾಯಿತು. ಇದರಿಂದ ಎಷ್ಟೋ ನೊಂದನು. ಸಂತಾಪಗೊಂಡನು ಮನಸ್ಸಿನಲ್ಲಿಯೇ ! ತನ್ನ ಸ್ಥಳವನ್ನು ಹಿಡಿದು ಕುಳಿತುಕೊಂಡನು ಹೇಗೋ ಸಾವರಿಸಿಕೊಂಡು.

ಸ್ವಲ್ಪ ಹೊತ್ತಿನಲ್ಲಿ ವೀರಭದ್ರನಾಯಕನು ಸಭಾಲಯವನ್ನು ಪ್ರವೆಶಿಸಿದನು. ಸಭಾಸದರು ಎದ್ದುನಿಂತು ಸ್ವಾಗತವನ್ನು ನೀಡಿದರು. ಆತನು ಸಿಂಹಾಸನದ ಹತ್ತಿರ ಬಂದ ಬಳಿಕ, ಸೇನಾಪತಿ ಲಿಂಗರಾಜನು ವಿರುಪಾಕ್ಷರಾಯರ ಮರಣದ ಬಗೆಗೆ ದುಃಖಪ್ರದರ್ಶನವನ್ನು ಸೂಚಿಸಿದನು. ಸಭೆಯು ಮೌನದಿಂದ ಮೃತರಿಗೆ ಶ್ರದ್ಧಾಂಜಲಿಯನ್ನು ಅರ್ಪಿಸಿತು ಬಳಿಕ ವೀರಭದ್ರನಾಯಕನು ಪೀಠವನ್ನು ಅಲಂಕರಿಸಿದನು. ಲಿಂಗರಾಜನು ಸಭೆಯ ಕಾರ್ಯಕಲಾಪಗಳನ್ನು ಸಭೆಗೆ ತಿಳಿಸಿದನು. ಬಳಿಕ ರಾಜನು ಹೇಳಿದನು

"ನಚ್ಚಿನ ಬಂಧುಗಳೇ, ನನ್ನ ಮಾವಂದಿರು ಸಚಿವರು ಆದ ಶಿವೈಕ್ಯ ವಿರೂಪಾಕ್ಷರಾಯರು ರಾಜ ಪ್ರಜೆಗಳ ಹಿತಕ್ಕಾಗಿ ಹೇಗೆ ದೇಹ ಸವಿಸಿದರೆಂಬದನ್ನು ನೀವು ಬಲ್ಲಿರಿ! ಅವರ ದೇಶಸೇವೆಯ ಬಗೆಯನ್ನು ಕೊಂಡಾಡದ

ಜನರಿಲ್ಲ. ನನ್ನ ಪೂಜ್ಯ ಅಜ್ಜಂದಿರ ಯುಕ್ತಿ ಯುಕ್ತವಾದ ಸಾಹಸದಿಂದಲೂ ವಿರೂಪಾಕ್ಷರಾಯರ ಚಾಣಾಕ್ಷತನದಿಂದಲೂ, ಬೆಳೆದು ಬೆಳಗುವ ಈ ರಾಜ್ಯದಲ್ಲಿ ನಾವೆಲ್ಲರು ಸುಖವಾಗಿದ್ದೇವೆ. ಅನುಭವಗಳ ಆಗರವೇ ಆಗಿದ್ದ ವಿರೂಪಾಕ್ಷರಾಯರ ನೆರವು ನನಗೆ ಬಹುಕಾಲ ಬೇಕಾಗಿತ್ತು. ಪರಮಾತ್ಮನ ಕೃಪೆಯಿರಲಿಲ್ಲ. ಮಾಡುವದೇನು ? ಅವರನ್ನು ಆದರ್ಶವಾಗಿಟ್ಟುಕೊಂಡು ಅವರ ಮಾರ್ಗದಲ್ಲಿ ರಾಜ್ಯ ಶಕಟವನ್ನು ಸರಿಯಾಗಿ ಸಾಗಿಸುವ ಮಂತ್ರಿಯನ್ನು ನಿಯಮಿಸುವ ಕಾರ್ಯ ಈಗ ನಮ್ಮ ಮುಂದೆ ಇದೆ. ಈ ಅಧಿಕಾರಕ್ಕೆ ಯಾರು ಯೋಗ್ಯರೆಂಬದನ್ನು ನಾನು ವಿಚಾರಿಸಿದ್ದೇನೆ.

"ಶಂಕರನಾರಾಯಣರು ಚಿಕ್ಕಂದಿನಿಂದಲೂ ರಾಜ್ಯದ ಸೇವೆಯಲ್ಲಿದ್ದ ಹಿರಿಯ ಅನುಭವಿಗಳಾಗಿದ್ದಾರೆ. ನನ್ನ ಅಜ್ಜಂದಿರ ಹಾಗು ವಿರುಪಾಕ್ಷರಾಯರ ಆಡಳಿತದಲ್ಲಿ ಭಾಗಿಗಳಾಗಿ, ರಾಜ್ಯಕಾರ್ಯದ ಎಲ್ಲ ಮುಖಗಳ ಪರಿಚಯ ಪಡೆದವರಾಗಿದ್ದಾರೆ. ಆಡಳಿತದ ಚತುರತೆ ಅವರಿಗಿದೆ. ದಕ್ಷರು, ಸುಶೀಲರು, ಪ್ರಜಾನುರಾಗಿಗಳು ಎಂಬದನ್ನು ನೀವು ಬಲ್ಲಿರಿ. ಆದ್ದರಿಂದ ಶಂರನಾರಾಯಣರನ್ನು ಮಂತ್ರಿಯಾಗಿ ನಿಯಮಿಸುತ್ತೇನೆ. ಸಭೆಯು ಒಪ್ಪಿಗೆಯಿದ್ದರೆ ಕಾರ್ಯಗತವಾಗುವದು...."

ಪರಕ್ಷಣದಲ್ಲಿ ಸಭಾಭವನವು ಕರತಾಡನದಿಂದ ನಿನದಿಸಿತು.

"ಒಪ್ಪಿಗೆ, ಒಪ್ಪಿಗೆ! ಜಯು ಕೆಳದೀಶ ! ಜಯು ವೀರಭದ್ರರಾಜೇಶ್ವರ !!"

ಅರಸನ ನಿರ್ಣಯದ ನುಡಿಗಳು ಸಭಿಕರ ಕಿವಿಗೆ ಅಮೃತ ಬಿಂದುಗಳಾಗಲು ಅವರು ಆನಂದದಿಂದ ಕೂಗಿದರು. ಮಂತ್ರಿ ಪದವು ಎಲ್ಲಿ ಸದಾಶಿವನ ಉಡಿಬೀಳುವದೋ ಎಂದು ಸಂದೇಹಗೊಂಡಿದ್ದ ಸಭಿಕರ ಮುಖಗಳು ಅರಳಿ, ಮೋಡಚದರಿದ ಚಂದ್ರನ ಕಳೆಯಂತೆ ಕಂಡವು. ಸಭೆಯಲ್ಲೆಲ್ಲ ಹೊಸತೇಜ ಮೂಡಿಬಂದಂತಾಯಿತು ಆದರೆ ಇಲ್ಲಿ ನೋಡಿರಿ! ವಿಪರೀತ ಪರಿಸ್ಥಿತಿ! ಸದಾಶಿವನ ಮೋರೆ ಕಪ್ಪಿಟ್ಟಿತು. ಅವನ ಕಲ್ಪನೆಯಲ್ಲಿಯ ವೈಭವದ ಶಿಖರವು ಮುರಿದು ನೆಲಕ್ಕೊರಗಿದಂತಾಯಿತು. ಅವನ ಆಶಾವೃಕ್ಷಕ್ಕೆ ಸಿಡಿಲು ಬಡಿದಂತಾಯಿತು. ಸಭೆಗೆ ಸಭೆಯೇ ತನ್ನನ್ನು ತಿರಸ್ಕಾರದಿಂದ ನೋಡುತ್ತಿರುವಂತೆ ಕಂಡಿತು. ಕೂಡಲೆ ಅವನು ಪ್ರತಿಯೊಬ್ಬರ ಮೇಲೆ ಉರಿಯತೊಡಗಿ

ದನು. ವೀರಭದ್ರನ ಮೇಲೆ ಕೆಂಡವನ್ನು ಕಾರುವಂತಾದನು. ಕ್ರೋಧ ಪರವಶನಾಗಿ ನಿಂತು ನುಡಿದನು:

"ನಿಮ್ಮ ಈ ಘೋಷಣೆಯನ್ನು ನಾನು ವಿರೋಧಿಸುತ್ತೇನೆ. ನೀವು ಚಿಕ್ಕವರು. ನಿಮ್ಮಲ್ಲಿ ಯುಕ್ತಾಯುಕ್ತ ವಿಚಾರವಿಲ್ಲ. ಪ್ರಖ್ಯಾತರಾದ ವಿರೂಪಾಕ್ಷರಾಯರ ಪ್ರತ್ಯಕ್ಷ ಮಗನು ನಾನಿರುತ್ತಿರುವವಾಗ ಅವರ ಮಂತ್ರಿಪದವನ್ನು ಅನ್ಯರಿಗೆ ಕೊಡುವದೇ? ರಾಜಕಾರ್ಯದಲ್ಲಿ ನನಗೆ ಅನುಭವವಿರುವದಿಲ್ಲವೇ? ನಾನೀಗ ಮಾಡುತ್ತಿರುವದೇನು? ಈ ಪ್ರಶ್ನೆಯನ್ನು ಪುನಃ ಪರಿಶೀಲಿಸಿ ನಿಮ್ಮ ನಿರ್ಣಯವನ್ನು ಬದಲಿಸಲಿಕ್ಕೇ ಬೇಕು........."

"ಅಗತ್ಯವಿಲ್ಲ" ಒಂದು ನಿಟ್ಟಿನಿಂದ ದಿಟ್ಟದನಿಯೊಂದು ಬಂದಿತು, ಕೂಡಲೆ.

"ಅಗತ್ಯವಿಲ್ಲ, ಬೇಡ, ಬೇಡ, ಪ್ರಭುಗಳ ನಿರ್ಣಯ ಸರಿಯಾಗಿದೆ." ಕೂಗು ತುಂಬ ಕೇಳ ಬಂದಿತು. ಮತ್ತೆ ಜಯ ಘೋಷವಾಯಿತು.

ಸದಾಶಿವನು ನಖಶಿಖಾಂತ ಉರಿಯಹತ್ತಿದನು. ಬಳಿಕ ವೀರಭದ್ರ ನಾಯಕನು ಆತನನ್ನು ಕುರಿತು ಸಮಾಧಾನದಿಂದ ಮಾತನಾಡಿದನು:

"ಸದಾಶಿವನಾಯಕರೇ ಶಾಂತರಾಗಿರಿ ! ಶಾಂತರಾಗಿ ವಿಚಾರಿಸಿದರೆ ನನ್ನ ವಿಚಾರವು ನಿಮಗೂ ಸರಿ ಕಂಡೀತು ! ನೀವರಿದಂತೆ ನಾನು ಚಿಕ್ಕವನೇ ! ನನಗೆ ಹಿರಿಯ ಅನುಭವಿಗಳ ನೆರವೇ ಬೇಕು ! ಶಂಕರನಾರಾಯಣರಿಗಿರುವ ಆಡಳಿತದ ಅನುಭವ ಇನ್ನಾರಿಗಿದೆ ? ಮೇಲಾಗಿ ಮಂತ್ರಿಯು ಜನಪ್ರಿಯನಾಗಿರಬೇಕು ! ಜನರಿಗೆ ಬೇಡಾದವನು ಅರಸು ಕೂಡ ಆಗಲಾರನು, ಈಗ ಜನರ ಬಲವು ಯಾರ ಕಡೆಗಿದೆಯೆಂಬುದನ್ನು ನೀವೇ ಕಾಣುತ್ತಿದ್ದೀರಿ. ನೀವು ಸಾವಧಾನದಿಂದ ವಿಚಾರಿಸಬೇಕು. ನನ್ನ ನಿರ್ಣಯವನ್ನೂ ಬದಲಿಸುವ ಅಗತ್ಯವಿಲ್ಲ. ಶಂಕರನಾರಾಯಣರಿಗೇ ಮಂತ್ರಿಪದ ಕೊಡುತ್ತೇವೆ."

ಕರತಾಡನ-ಜಯಘೋಷಗಳಲ್ಲಿ ಮತ್ತೆ ಮುಳುಗಿತು ಸಭೆ ! ಸದಾಶಿವನ ತಿಳಿಗಣ್ಣು ತೆರೆಯಲಿಲ್ಲ. ಆವನು ಅಪಮಾನಿತನಂತೆ ರೋಷದಿಂದ ಎದ್ದು ಸಭೆಯನ್ನು ಬಿಟ್ಟು ಹೊರಟು ಹೋದನು. ಅವನ ಗೆಳೆಯರ ಮುಖಗಳು ಒಣಗಿದ ಸೋರೆಯ ಕಾಯಿಯಂತಾಗಿದ್ದವು. ಅವರು ಓಲಗದ ನಿಯಮವನ್ನು ಮುರಿದು ಹೊರಡಲು ಧೈರ್ಯಸಾಲದೆ ಸುಮ್ಮನೆ ಕುಳಿತರು.

ವೀರಭದ್ರನಾಯಕನು, ಸದಾಶಿವನ ಔದ್ಧತ್ಯಕ್ಕೆ ಶಿಕ್ಷೆ ವಿಧಿಸುವ ವಿಚಾರ ಮಾಡಲಿಲ್ಲ. ಆತನ ಸಹನೆಗೆ ಸದಾಶಿವನು ತನ್ನ ತಂಗಿಯ ಪತಿಯೆಂಬುದು ಕಾರಣವಾಗಿರಲಿಲ್ಲ. ಸ್ವಭಾವತಃ ಆತನು ದೊಡ್ಡ ಮನಸ್ಸಿನವನು. ಒಂದು ಕ್ಷಣ ಕಳೆದ ಬಳಿಕ ಸಭೆ ಮತ್ತೆ ಕಳೆಗೊಂಡಿತು. ಗೊತ್ತಾದಂತೆ ಶಂಕರನಾರಾಯಣನಿಗೆ ಸಚಿವ ಪದದ ವಸ್ತ್ರವನ್ನು ಅರ್ಪಿಸಿ ಬಹುಮಾನ ಮಾಡಿದನು. ವೆಂಕಟನಾಯಕ- ವಿರೂಪಾಕ್ಷ ಮಂತ್ರಿಗಳ ಆಡಳಿತದ ಗರಡಿಯಲ್ಲಿ ಪಳಗಿದವನು ಶಂಕರನಾರಾಯಣನು ! ಕಂದಾಯದ ಹಿರಿಯ ಅಧಿಕಾರಿಯಾಗಿ ಜನರಿಗೆ ತೊಂದರೆಯಾಗದಂತೆ ರಾಜ್ಯದ ಬೊಕ್ಕಸಕ್ಕೆ ಹಣ ಸೇರಿಸುವಲ್ಲಿ ಚತುರನೆನಿಸಿದವನು !! ಈಗ ಮಂತ್ರಿಯಾಗಿ ಹೆಚ್ಚಿನ ಹೊಣೆಯ ನಿರ್ವಹಿಸಲು ಕಂಕಣಬದ್ಧನಾದನು. ಸಭೆಯ ವಿಸರ್ಜನೆಯಾಯಿತು. ಉದಾಸೀನತೆಯಿಂದ ಬಂದ ಜನರು ಉತ್ಸಾಹಿತರಾಗಿ ಅರಸನನ್ನು ಕೊಂಡಾಡುತ್ತ ನಡೆದರು

ಅಂದಿನ ಪ್ರಸಂಗದಿಂದ ಸದಾಶಿವನಾಯಕನೂ ಅವನ ಗೆಳೆಯರೂ ಇಡಿಯ ರಾಜ್ಯದೊಡನೆ ವೈರವನ್ನೇ ಹಿಡಿದರು, ಹೇಗಾದರೂ ಮಾಡಿ ವೀರಭದ್ರನಾಯಕನನ್ನು ಪಟ್ಟದಿಂದ ತಳ್ಳಿ ಇಲ್ಲವೆ ನಾಶಮಾಡಿ, ವೃದ್ಧನೂ ರೋಗಿಯೂ ಆದ ವೀರ ಒಡೆಯನಿಗೆ ಪಟ್ಟಗಟ್ಟಿ ಎಲ್ಲ ಅಧಿಕಾರಗಳನ್ನು ತಮ್ಮ ಕೈಯಲ್ಲಿ ತೆಗೆದುಕೊಳ್ಳಬೇಕೆಂದು ಸಂಚು ನಡಿಸಿದರು. ಅದಕ್ಕಾಗಿ ಅವರು ವರ್ಷೆರಡುವರ್ಷ ಪ್ರಯತ್ನ ಮಾಡಿ, ಯುಕ್ತಿ ಪ್ರಯುಕ್ತಿಗಳಿಂದ ಕೆಲವು ಸರದಾರರನ್ನು ತಮ್ಮ ಕಡೆಗೆ ಒಲಿಸಿಕೊಂಡರು. ಹೀಗೆ ಸದಾಶಿವನು ಸ್ವಾರ್ಥಕ್ಕಾಗಿ ಸ್ವರಾಜ್ಯವನ್ನೇ ನಾಶಮಾಡುವ ಹಾದಿಯನ್ನು ಹಿಡಿದು ಬಿಟ್ಟನು. ವೀರಭದ್ರರಾಜನು ತೀರ್ಥರಾಜಪುರಕ್ಕೆ ಹೋದ ಸಂಧಿಯಲ್ಲಿ ತನ್ನ ಕ್ರಾಂತಿಯನ್ನು ಸಾಧಿಸುವ ನಿಶ್ಚಯ ಮಾಡಿದ್ದನ್ನು ಮೊದಲನೆಯ ಪ್ರಕರಣದಲ್ಲಿ ಹೇಳಿದೆ. ದುರಹಂಕಾರಿಯಾದ ಆತನು ತನ್ನ ಅಪಮಾನವನ್ನು ತಾನೇ ಮಾಡಿಕೊಂಡಿದ್ದಾನೆ. ಈ ಅಪಮಾನದ ಸೇಡು ತೀರಿಸಲು ಬಲುದೊಡ್ಡ ಬಲಿತೆಗೆದುಕೊಳ್ಳಲು ಹೊಂಚು ಹಾಕಿದ್ದಾನೆ.

—

## ೩. ಭಾಗ್ಯದ ಬಾಗಿಲು ತೆರೆಯಿತು

ಈ ಹೊತ್ತು ಈಕ್ಕೇರಿ ಪುರದಲ್ಲಿ ಒಳ್ಳೇ ಗಡಿಬಡಿ. ವೀರಭದ್ರರಾಜನು ಸಕಲಸರಂಜಾಮುದೊಡನೆ ತೀರ್ಥರಾಜಪುರಕ್ಕೆ ಪ್ರಯಾಣ ಮಾಡತಕ್ಕವನಿರುವನು. ನಾಲ್ಕೆಂಟು ದಿನಗಳಲ್ಲಿ ತಿರುಗಿ ಬರುವಂತೆಯೂ ಇಲ್ಲ. ಮಹಾಶಿವರಾತ್ರಿಯ ಪರ್ವವನ್ನು ತೀರಿಸಿಕೊಂಡೇ ತಿರುಗಿ ಬರುವದು; ಒಂದು ತಿಂಗಳ ಮೇಲೆ ಹಿಡಿಯುವದು. ಅಷ್ಟು ದಿವಸ ಕ್ಷೇತ್ರಕ್ಕೆ ಸಮೀಪವಾಗಿರುವ ನಂದನಪುರದಲ್ಲಿ ಬೀಡಾರ ಮಾಡಿ ಆಡಳಿತ ನಡಿಸಬೇಕೆಂದು ಗೊತ್ತಾಗಿತ್ತು. ಅದರಿಂದ ಈ ಸಾರೆ ವಿಶೇಷ ಸೈನ್ಯವು, ಮಂತ್ರಿಗಳು, ಕರಣಿಕರು, ಕರ್ಮಚಾರಿಗಳು ಅವರೆಲ್ಲರ ಕುಟುಂಬದವರು ಇಷ್ಟೆಲ್ಲ ಜನರಿಗೆ ಬೇಕಾಗುವ ಸಾಮಗ್ರಿಯೂ ಅಧಿಕರಣದ ಲೆಖ್ಖಪತ್ರಗಳೂ ಹೋಗಬೇಕಾಗಿತ್ತು. ಅರಸನ ಸಂಗಡ ಯಾತ್ರೆಗೆ ಹೋಗುವ ಈ ಎಲ್ಲ ಜನರಿಗೆ ಪ್ರಯಾಣ ವ್ಯವಸ್ಥೆಯು ಸಂತೋಷದ ಸುಗ್ಗಿಯಾಗಿತ್ತು.

ಇಳಿವಿಸಿಲಿನ ಸೊಗಸಿನ ಸಮಯದಲ್ಲಿ ಸಾಮಾನು ಹೇರಿದ ನೂರಿನ್ನೂರು ಬಂಡಿಗಳು ಊರ ಹೊರಗೆ ಹೋದವು. ಆನೆ–ಕುದುರೆ–ರಥಗಳು ಅರಮನೆಯ ಮುಂದಿನ ಬೈಲಲ್ಲಿ ಮೇಳುಗೊಂಡು ನಿಂತವು. ಭಟರು ನಡುವಿನ ಪಟಾಂಗಣದಲ್ಲಿ ಸಾಲು ಸಾಲಾಗಿ ನಿಂತರು. ಅಧಿಕಾರಿಗಳು ಸಭಾಲಯದಲ್ಲಿ ನೆರೆದರು. ಇಷ್ಟರಲ್ಲಿ ಹಗಲಿನ ಹತ್ತು ತಾಸುಗಳು ಕಳೆದವು. ವೀರಭದ್ರನಾಯಕನೂ ಸಿದ್ಧನಾಗಿ ಸಭಾಲಯವನ್ನು ಪ್ರವೇಶಿಸಿದನು. ಆಗ ಮೊಳಗಿದ ಜಯಧ್ವನಿ- ನಗಾರಿ ನೌಬತ್ತುಗಳ ಧ್ವನಿಗಳು ಆಗಸಕ್ಕೆ ಅಡರುವಂತಾದವು. ಬಳಿಕ ಆತನು ಪ್ರಯಾಣದ ವ್ಯವಸ್ಥೆಯನ್ನು ಔಪಚಾರಿಕವಾಗಿ ಸ್ವಲ್ಪದರಲ್ಲಿ

ಪರಿಶೀಲಿಸಿದನು. ಆ ವೇಳೆ ವೈದಿಕರು ಸ್ವಸ್ತಿಪಾಠ ಹೇಳುತ್ತಿರಲು ಆಸನ ದಿಂದೆದ್ದು ಹೊರಗೆ ಬಂದು ತನ್ನ ಮಹಾರಥವನ್ನೇರಿದನು. ಜಯಧ್ವನಿಯೊ ಡನೆ ಸೈನ್ಯ ಸಾಗಿತು. ಅರಸನ ರಥದ ಹಿಂದೆ ಅರಸುಮನೆತನದ ಜನರೂ ದಾಸಿಯರೂ ಇರುವ ಹನ್ನೆರಡು ರಥಗಳು ನಡೆದವು. ಹಿಂದೆ ಪರಿವಾರದ 50-60 ಬಂಡಿಗಳು ಇದ್ದವು. ಕೊನೆಗೆ ಹಿಂಭಾಗದ ಕಾವಲಿಗರಾದ ನೂರು ಜನ ಅಶ್ವಾರೋಹಿಗಳು ಸಾಗಿದರು. ಹೀಗೆ ಅರಸನು ಹನ್ನೊಂದು ತಾಸು ಮುಗಿಯುವದರೊಳಗಾಗಿ ಇಕ್ಕೇರಿಯ ನಗರದಿಂದ ಹೊರಹೊರಟನು. ಈ ಮಹಾ ಜನಸಮುದಾಯವು ಒಂದು ಗಾವುದ ಹೋಗಿರಬಹುದು ಸೂರ್ಯ ದೇವನು ಪಶ್ಚಿಮಾಚಲದ ಆಚೆಯಲ್ಲಿ ಮರೆಯಾದನು.

○ ○ ○ ○

ವೀರ ಒಡೆಯರ ರೋಗವು ಹೆಚ್ಚಿ ಮುಪ್ಪಿನ ಅವನ ದೇಹ ತೀರ ಕ್ಷೀಣ ವಾದುದರಿಂದ ಅವನೂ ಅವನ ಪರಿವಾರವೂ ತೀರ್ಥರಾಜಪುರಕ್ಕೆ ಹೋಗು ವಂತಿರಲಿಲ್ಲ ಸದಾಶಿವನು ಏನೋ ಒಂದು ನೆವವನ್ನು ಹೇಳಿ ಹಿಂದೆ ಉಳಿದು ಕೊಂಡನು ಅವನ ನೆರಳಿನಂತಿರುವ ಪುಟ್ಟಣ್ಣನೂ ಅರಸನಿಂದ ಹಿಂದುಳಿದ ಕಾರ್ಯಭಾರವನ್ನೇ ವಹಿಸಿಕೊಂಡು ನಗರದಲ್ಲಿಯೇ ಉಳಿದನು. ರಾಜನು ಶೂರಸೇನಾಪತಿ ಲಿಂಗರಾಜನನ್ನು ರಾಜಧಾನಿಯ ರಕ್ಷಣೆಗೆ ನಿಯಮಿಸಿದನು; ಪುಟ್ಟಣ್ಣ, ರಾಮಹೆಗ್ಗಡೆ, ಪರ್ವನಾಯಕ ಇವರು ಲಿಂಗರಾಜನಿಗೆ ಸಹಾಯ ಕ್ಕಾಗಿ ಇಡಲ್ಪಟ್ಟಿದ್ದರು; ಅರ್ಧ ಸೈನ್ಯವಿತ್ತು. ಲಿಂಗರಾಜನ ಹೊರತು ರಾಜ ಧಾನಿಯಲ್ಲಿ ಉಳಿದ ಸರದಾರರೆಲ್ಲರೂ ಸದಾಶಿವನ ಸಂಚಿಗೆ ಅನುಕೂಲರಾದ ವರೇ ಆಗಿದ್ದರು. ರಾಜನ ವಿಷಯದಲ್ಲಿ ವೃಥಾ ಮನಸ್ಸು ಕೆಡಿಸಿಕೊಂಡು ಸದಾಶಿವನ ಪಕ್ಷದವನಾಗಿದ್ದ, ಇನ್ನೊಬ್ಬ ಶೂರ ದಳಪತಿ ತಿಮ್ಮನಾಯಕನು ಸದಾಶಿವನ ತಂತ್ರದಂತೆ, ಮಲೆಯ ಪುಂಡರನ್ನು ದಂಡಿಸಲೆಂದು ಅರಸನಪ್ಪಣೆ ಪಡೆದು ಮೊದಲೇ ಪಶ್ಚಿಮಕ್ಕೆ ಹೋಗಿದ್ದನು. ಗುಟ್ಟಾಗಿ ಅಲ್ಲಿ ಬೇಡರ ಪಡೆ ಕೂಡಿಸುತ್ತಿದ್ದನು. ಅದೊಂದು ಸಂಚಿನ ಕಾರ್ಯನಿರ್ವಹಣೆಯಾಗಿತ್ತು. ಈ ಎಲ್ಲ ಅನುಕೂಲತೆಯಲ್ಲಿ ತನ್ನ ಕಾರ್ಯವನ್ನು ಯಾವಾಗ ಸಾಧಿಸಿಕೊಂಡೇ ನೆಂದು ಸದಾಶಿವನು ಆತುರದಿಂದ ತಳಮಳಿಸುತ್ತಿದ್ದನು.

ರಾತ್ರಿಯ ಪ್ರಥಮ ಯಾಮವು ಕಳೆಯಿತು. ಮನುಷ್ಯ ಸಂಚಾರ ಇಲ್ಲ ವಾಯಿತು. ಇಂದು ಪಟ್ಟಣದಲ್ಲಿ ಜನರೇ ಕಡಿಮೆಯಾಗಿದ್ದರು, ಅರಮನೆ

ಯಂತೂ ಮೊದಲೇ ಶಾಂತವಾಯಿತು. ಶಾಂತವಾದ ರಾತ್ರಿ, ಸುತ್ತಲೂ ನಿಶ್ಶಬ್ದ! ಒಮ್ಮೊಮ್ಮೆ ನಗರರಕ್ಷಕರ ಜಾಗ್ರತಾಸೂಚಕ ಭಯಂಕರ ಧ್ವನಿಯಿಂದ ಶಾಂತತೆಗೆ ಭಂಗಬರುತ್ತಿತ್ತು. ಎಲ್ಲರೂ ಸುಖದಿಂದ ನಿದ್ರಿಸುತ್ತಿದ್ದರು. ಆದರೆ ಚಿಂತಾಗ್ರಸ್ತರಿಗೆ ಸುಖವೆಲ್ಲಿ? ಅವರ ಮೇಲೆ ನಿದ್ರೆಯ ಅಧಿಕಾರ ನಡೆಯದು. ಚಿಂತೆಯೊಂದು ರೋಗವೇ! ಈ ರೋಗ ದೇಹರೋಗಕ್ಕಿಂತ ಭಯಂಕರವಾದುದು. ದೇಹರೋಗ ಪೀಡಿತನು ಸ್ವಲ್ಪ ಹೊತ್ತಾದರೂ ಆರಾಮವೆನಿಸಿ ನಿದ್ರಿಸಬಹುದು, ಘೋರ ಚಿಂತಾರೋಗ ಪೀಡಿತನಿಗೆ ನಿದ್ರೆಯೇ ಇಲ್ಲ; ಸ್ವಸ್ಥವೂ ಇಲ್ಲ, ಸುಖವೂ ಇಲ್ಲ. ಘೋರ ಕಾರ್ಯಾಸಕ್ತನಾದ ಸದಾಶಿವನು ಈ ಸಮಯದಲ್ಲಿ ನಿದ್ರೆ ಬಾರದೆ ಚಿಂತಿಸುತ್ತಿದ್ದನು. ಅವನು ಮಂದಿರದ ಕೊನೆಯ ತನ್ನ ಕೋಣೆಯಲ್ಲಿ ಮಂಚದ ಮೇಲೆ ಹೊರಳಾಡುತ್ತಿದ್ದನು.

'ಈ ಹೊತ್ತು ವೀರಭದ್ರ ನಾಯಕನು ದೊಡ್ಡ ಜನ ಸಮುದಾಯದೊಡನೆ ರಾಜಧಾನಿಯಿಂದ ಹೊರಟು ಹೋಗಿದ್ದಾನೆ. ನನ್ನ ಕಾರ್ಯ ಸಾಧಿಸಲು ಇದೇ ಸಮಯ ಯೋಗ್ಯವಾದದ್ದು.' ಎಂದು ತಿಳಿದ ಸದಾಶಿವನನ್ನು ಕಾರ್ಯ ಸಾಧನೆಯ ಆಲೋಚನೆಗಳು ಮುತ್ತಿದ್ದವು. 'ವೀರಒಡೆಯನನ್ನು ಪಟ್ಟಕ್ಕೆ ಕೂಡ್ರಿಸಬೇಕು; ರಾಜಸೂತ್ರಗಳನ್ನೆಲ್ಲ ತನ್ನ ಕೈಯ್ಯಲ್ಲಿ ತೆಗೆದುಕೊಳ್ಳಬೇಕು; ಅಪಮಾನದ ಸೇಡು ತೀರಿಸಿಕೊಳ್ಳಬೇಕು. ಸರಿ ಆದರೆ ವೀರಭದ್ರನ ಪ್ರಬಲದಳಪತಿ ಲಿಂಗರಾಜನೊಬ್ಬನು ರಾಜಧಾನಿಯಲ್ಲಿರುವನಲ್ಲ! ಇವನನ್ನು ವಂಚಿಸುವ ಸಂಚಿಕೆಯೇನು? ಪುಟ್ಟಣ್ಣ, ರಾಮಹೆಗ್ಗಡೆ, ಪರ್ವನಾಯಕರು ಮಾತು ಕೊಟ್ಟಂತೆ ತಮ್ಮ ಕೆಲಸ ಮಾಡುವರೇ? ತಿಮ್ಮನಾಯಕನನ್ನು ಒಂದು ರಹಸ್ಯ ಕಾರ್ಯಕ್ಕೆ ಕಳುಹಿದ್ದೇನೆ. ಆ ಮಾರ್ಗದಿಂದ ವೀರಭದ್ರನ ನಾಶವು ತಡೆಯಿಲ್ಲದೆ ಪೂರೈಸಬಹುದೇ? ಅಥವಾ ಆ ಗುಟ್ಟು ರಟ್ಟಾದರೆ ಗತಿಯೇನು?........ ಸಿಂಹಾಸನದ ಮಾತು........ ವೀರಒಡೆಯರು ಹಿಂದೊಮ್ಮೆ ಈ ಮಾತು ತೆಗೆದಾಗ ಒಪ್ಪಿಕೊಂಡಿದ್ದರು. ಈಗ ಏನು ಅನ್ನುವರೋ ಏನೋ? ಅನ್ನುವದೇನು? ರಾಜಾಧಿಕಾರವು ಯಾರಿಗೆ ಬೇಡ? ಹೆಣವೂ ಕೂಡ ಒಲ್ಲೆನೆನ್ನಲಿಕ್ಕಿಲ್ಲ! ವೀರಒಡೆಯರಾದರೂ ಏನು? ಜೀವದ ಹೆಣವೇ ಸರಿ. ಅವರು ಹಾಗಿರುವದೇ ಮುಂದೆ ನನ್ನ ಪ್ರತಿಷ್ಠೆ ಬೆಳೆಯುವದಕ್ಕೆ ಅನುಕೂಲ! ಆದಿರಲಿ, ಅವರು ಸಿಂಹಾಸನಾಧೀಶ್ವರರಾಗಲಿಕ್ಕೆ

ಒಪ್ಪುವರು.......... ಸರಿಯಾಯಿತು.......... ಅದೆಲ್ಲವಾಯಿತು. ಆದರೆ ಮೊದಲು ಎಲ್ಲ ಕಾರ್ಯಗಳಿಗೂ ಬಾಧಕನಾದ ಲಿಂಗರಾಜನನ್ನು ಹೇಗೆ ಹೊರಗೆ ಹಾಕಬೇಕು?....... ಅವನನ್ನು ಸೆರೆಹಿಡಿಯುಬಹುದೇ?....... ಅಸಾಧ್ಯ.......' ಈ ಬಗೆಯಾಗಿ ಒಮ್ಮೆ ತನ್ನ ಮುಂದಿನ ಅಧಿಕಾರದ ಸುಖ ಮಯ ಕಲ್ಪನೆಯ ಆನಂದ! ಒಮ್ಮೆ ಕಾರ್ಯ ಸಾಧನೆಯ ಕಷ್ಟಕರ ಕಲ್ಪ ನೆಯ ತಳಮಳ! ಒಮ್ಮೆ ತನಗಾದ ಅಪಮಾನದ ನೆನಹಿನಿಂದಾಗುವ ಸಂತಾಪ! ಅವನು ಕ್ರೋಧ, ದುಃಖ, ತಿರಸ್ಕಾರ, ಭಯ, ಉದ್ವಿಘ್ನತೆ, ಉಬ್ಬು ಮೊದಲಾದ ಮುತ್ತುವ ಮನೋವಿಕಾರಗಳ ತಿಕ್ಕಾಟದಲ್ಲಿ ಘಾಸಿಯಾಗು ತ್ತಿದ್ದನು; ಇಂಥವನಿಗೆ ನಿದ್ರೆಯೆಲ್ಲಿಂದ ಬರಬೇಕು ?

ಸತ್ಕಾರ್ಯಗಳು ಸರಳವಾದ ಮನೋಬಲದಿಂದ ಸಾಗುವವು. ಚಿತ್ರ ವಿಚಿತ್ರವಾದ ಕವಲುಳ್ಳ ವಿಚಾರಗಳು ಅದಕ್ಕೆ ಬೇಡ. ಆದರೆ ಇದು ರಾಕ್ಷಸೀ ಮಹತ್ವಾಕಾಂಕ್ಷೆಯ ಘೋರ ಕಾರ್ಯ ! ವಂಚನೆ ಅನ್ಯಾಯುಗಳ ಕಾರ್ಯ ! ಇಂಥದಕ್ಕೆ ಇಷ್ಟು ಗೊಂದಲದ ವಿಚಾರ ಮಾಡಬೇಕಾದುದರಲ್ಲಿ ಆಶ್ಚರ್ಯ ವಾದರೂ ಏನು? ಬಹಳ ಹೊತ್ತಿನವರೆಗೆ ಅವನು ತನ್ನ ಕಾರ್ಯ ಸಾಧನೆಯ ಅನೇಕ ತಂತ್ರಗಳನ್ನು ಮನಸ್ಸಿನಲ್ಲಿಯೇ ನಡಿಸಿ ನೋಡಿದನು. ಎಲ್ಲ ತಂತ್ರ ಗಳೂ ಸಫಲವಾಗುವಂತೆಯೇ ಕಂಡವು. ಅವುಗಳಲ್ಲಿ ಲಿಂಗರಾಜನನ್ನು ಹೊರಗೆ ಹಾಕುವ ತಂತ್ರವು ಮೊದಲನೆಯದು. ಲಿಂಗರಾಜನನ್ನು ವಂಚಿಸುವ ಹಂಚಿಕೆಗಳನ್ನು ಹುಡುಕಿ ನಿಶ್ಚಯಿಸಿ ಬಿಟ್ಟನು. ಕಾರ್ಯ ಸಾಧಿಸುವ ಕಲ್ಪನೆ ಗಳಿಂದ ಅವನಿಗೆ ಸಮಾಧಾನವಾಯಿತು.

'ವೀರಒಡೆಯರು ಮೊದಲು ಇದಕ್ಕೆ ಒಪ್ಪಬೇಕು.........ಹೌದು.... ವೀರಒಡೆಯರನ್ನು ಕಂಡು ಮಾತಾಡಿಕೊಂಡು ಬರಲು ಈಗಲೇ ಹೋಗ ಬೇಕು, ಇದೇ ಸಮಯ ತಕ್ಕುದು' ಎಂದು ಆತನು ಎದ್ದೇ ಬಿಟ್ಟನು. ಬಟ್ಟೆ ಗಳನ್ನು ಧರಿಸಿ ಖಡ್ಗವನ್ನು ಕೈಯಲ್ಲಿ ತೆಗೆದುಕೊಂಡು ಬಾಗಿಲವನ್ನು ಓರೆ ಮಾಡಿ ಹೊರಗೆ ಬಂದನು. ನಿಶಾದೇವಿಯ ಸೆರಗಿನ ಮರೆಯಲ್ಲಿಯೇ ಕೋಲಾಹಲದ ಮೂಲವೊಂದು ವೇಷಧರಿಸಿ ಹೊರಬಿದ್ದಂತಾಯಿತು.

ಹೊರಗೆ ಕತ್ತಲು; ಎಲ್ಲಿಯೂ ಸದ್ದಿಲ್ಲ. ಬೀದಿಯ ಬದಿಯಲ್ಲಿ ಶಿಶಿ ರದ ತರಗೆಲೆಗಳು ಸುಳಿಗಾಳಿಯಿಂದ ಸರಸರವೆನ್ನುವ ಸಪ್ಪಳವು ಮಾತ್ರ ಎವೆ ಕೊರೆಯುತ್ತಿತ್ತು. ಕಾರ್ಯಾತುರನಾಗಿದ್ದ ಸದಾಶಿವನು ಕಾಲೊಳ

ಗಿನ ಯಾವ ಎಡರುಗಳನ್ನು ಲಕ್ಷಿಸದೆ ಸರಸರನೆ ನಡೆದು ಹೋದನು. ವೀರ ಒಡೆಯನು ವಾಸಿಸುವ ಮಂದಿರದ ಮುಂದೆ ಬಂದು ನಿಂತನು. ನಿದ್ರೆಯ ಗುಂಗಿನಲ್ಲಿದ್ದ ದ್ವಾರರಕ್ಷಕನು 'ಯಾರವರು' ಎಂದನು.

"ಯಾಕೆಲಾ, ನಾನು ಬಂದಿದ್ದೇನೆ. ನನ್ನ ಗುರುತು ಹತ್ತದೇನು? ಒಡೆಯರನ್ನು ಕಾಣಬೇಕಾಗಿದೆ." ನಸುದರ್ಪಿನಲ್ಲಿ ಸದಾಶಿವನು ನುಡಿದನು. ಕಾವಲಿಗನು 'ಹೂಂ....ತಾವು......ಬಂದಿರುವಿರಾ? ಹೋಗಿರಿ ಹೂಂ....' ಎನ್ನುತ್ತ ಪುನಃ ನಿದ್ರೆಯ ಗುಂಗಿನಲ್ಲಿ ಲೀನನಾದನು. ಸದಾಶಿವನು ಭರದಿಂದ ಒಳಗೆ ನಡೆದನು..

ಇವನು ದುರಾಲೋಚನೆಯಿಂದ ನಿದ್ರೆ ಬಾರದೆ ತಳಮಳಿಸಿ ಬಂದಿದ್ದರೆ, ವೀರ ಒಡೆಯನು ಬೇನೆಯಿಂದ ನಿದ್ರೆಬಾರದೆ ತೊಳಲುತ್ತ ಬಿದ್ದಿದ್ದನು. ಆತನ ನಿದ್ರೆಯು ಬಹುಮಟ್ಟಿಗೆ ಸತ್ತೇ ಹೋಗಿತ್ತು. ಅಕಸ್ಮಾತ್ತಾಗಿ ಮಂಚದ ಮುಂದೆ ಬಂದು ನಿಂತ ಸದಾಶಿವನನ್ನು ನೋಡಿ ಆತನು ನರಳುತ್ತ—

"ಇಂಥ ಅಪರಾತ್ರಿಯಲ್ಲಿ ಬಂದಿರಿ ನಾಯಕರೆ? ಕುಳಿತುಕೊಳ್ಳಿರಿ."

"ಒಡೆಯರ ಸೇವೆಗಾಗಿ! ರಾತ್ರಿಯೇನು ಹಗಲೇನು?"

"ಹಾಗೆಂದೇ ಇಕ್ಕೇರಿಯ ರಾಜ್ಯವು ಘನತೆಯಲ್ಲಿರುವದು."

"ಒಡೆಯರೆ, ಅದನ್ನು ನೀವು ಬಲ್ಲಿರಿ! ಆಳುವವರು ಅರಿಯಬೇಕಲ್ಲ! ನಿಮ್ಮ ರಾಜ್ಯವನ್ನು ಆಳುವವರು ನಿಮ್ಮನ್ನೇ ಅರಿಯದಿರುವಾಗ ನಮ್ಮಂತಹರ ಗಣನೆಯೇ ಅವರಿಗೆ?"

"ನಿಮ್ಮ ರಾಜ್ಯವನ್ನು!! ನಿಮ್ಮ ರಾಜ್ಯವೆಂದು ನೀವು ಮಾತ್ರ ಅಂದಿರಿ. ಐವತ್ತು ವರ್ಷ ಹಲುಬಿದೆನು ರಾಜ್ಯವು ನನ್ನದೆಂದು. ಯಾರು ಕೇಳಿದರು?"

"ಐವತ್ತು ವರ್ಷ ಕಾಯ್ದ ಫಲ ಈಗ ಸನ್ನಿಹಿತವಾಗುತ್ತಲಿದೆ, ಸಿದ್ಧರಿರುವಿರಾ? ತಾವು ಹಿರಿಯ ರಾಜರ ಹಿರಿಯ ಮಕ್ಕಳು! ಹಿರಿಯರು, ವೃದ್ಧರು! ಹೀಗೆ ಪರಕೀಯರಂತೆ ಅನ್ಯಾಯವಾಗಿ ಕಾಲಕಳೆಯುವದನ್ನು ನೋಡುವದು ಇನ್ನು ನಮಗೂ ಆಗದು."

"ಆದರೆ, ಏನು ಮಾಡುವದು?"

"ಏನು ಮಾಡುವದೇ? ಒಡೆಯರು ಸಿಂಹಾಸನವನ್ನು ಸಂಪಾದಿಸಿ

ರಾಜ್ಯವಾಳುವವು "

"ಇದೇನು ಸಾಮಾನ್ಯ ಮಾತೇ? ನನ್ನಲ್ಲಿ ಬಲವುಂಟೇ? ಧನವುಂಟೇ? ನನ್ನಧೀನದಲ್ಲಿ ಏನಿದೆ? ನನ್ನಿಂದ ಏನಾದೀತು?"

"ಒಡೆಯರೇ, ಇದನನ್ನೇನು ನುಡಿಯುತ್ತಿರುವಿರಿ? ರಾಜ್ಯವೂ ದಳವೂ ಧನವೂ ಯಾರವು? ನಿಮ್ಮವಲ್ಲವೇ? ಔದಾಸೀನ್ಯದಿಂದ ಅವುಗಳ ಸಂಬಂಧವನ್ನು ಕಡಿದುಕೊಂಡಿರುವಿರಿ. ನಿಮ್ಮ ರಾಜ್ಯಾಧಿಪತ್ಯವನ್ನು ಸಾರಿರಿ! ಎಲ್ಲವೂ ನಿಮ್ಮವಾಗುವವು."

"ವೀರಭದ್ರನ ಪ್ರತಾಪದಲ್ಲಿ ಸರ್ವರೂ ಸೇರಿಕೊಂಡಿದ್ದಾರೆ."

"ಸರ್ವರಲ್ಲ; ನಿಮ್ಮ ಸಲುವಾಗಿಯೂ ಹಲವರಿದ್ದಾರೆ. ನೀವು ನಿಮ್ಮ ಅಧಿಕಾರವನ್ನು ಪ್ರಕಟಿಸಿದರೆ, ನ್ಯಾಯಪಕ್ಷಪಾತಿಗಳಾದ ಅವರೆಲ್ಲರು ಬಹಿ-ರಂಗವಾಗಿ ನಿಮ್ಮ ಬೆಂಬಲಕ್ಕೆ ಬಂದು ನಿಲ್ಲುವರು. ನಿಜವಾದ ಹಕ್ಕುದಾರರಾದ ನಿಮ್ಮ ಬಾಧ್ಯತೆಯನ್ನು ಪುನಃ ನೆಲೆಗೊಳಿಸಲು ಎಷ್ಟೋ ಜನರು ಸಿದ್ಧರಿರುವರು. ನಿಮಗೆಷ್ಟು ಜನರು ಬೇಕು? ನಿಮಗೆ ಸಂದೇಹವೇ ಬೇಡ! ಒಡೆಯರೆ, ನೀವು ಇಂದು ಅರಸರಾಗಲು ಸಿದ್ಧರಾದರೆ ನಿಮ್ಮ ಹಿತಕ್ಕಾಗಿ ನಾವು ನಮ್ಮ ಪ್ರಾಣಅರ್ಪಿಸಲು ಸಿದ್ಧ!"

"ನಿಜ ನಿಜ!— ನೀವೇ ಈ ಕಾರ್ಯದ ಸಂಘಟನೆ ಮಾಡಬೇಕಾದೀತು!"

"ಓಹೋ! ಯಾಕಾಗಬಾರದು? ನನ್ನ ಬಲದ ಮೇಲೆ ತಾವು ನಂಬಿಗೆಯಿಡಬೇಕು. ಆ ವೀರಭದ್ರನಿಂದ ನನಗೆ ಯಾವ ಹಿತವಾಗಬೇಕಾಗಿದೆ? ಅವನಿಂದ ನಾನು ಯಾವ ಗೌರವ ಪಡೆಯಬೇಕಾಗಿದೆ? ಸಾಕು, ಆತನು ಹಿಂದೊಮ್ಮೆ ಸಭೆಯಲ್ಲಿ ಮಾಡಿದ ಅಪಮಾನವೇ ಸಾಕು!! ಇದಕ್ಕೂ ಹೆಚ್ಚಿನ ಹಿತಗೌರವ ಏನು ಬೇಕು? ಒಡೆಯರೇ, ಅತ್ಯಂತ ಸಂತಾಪಗೊಂಡಿರುವ ನಾನು, ಆ ವೀರಭದ್ರ ನಾಯಕನಿಗೂ ಅವನ ಅನುಯಾಯಿಗಳಿಗೂ ಯಮನೆಂದು ತಿಳಿಯಿರಿ. ಇಂದೇ ನೀವು ಈ ಮಾತಿಗೆ ಒಪ್ಪಿಗೆ ಕೊಟ್ಟು ನೋಡಿರಿ! ನಿಮ್ಮ ಹಿತವೂ ಆಯಿತು, ನನ್ನ ಅಪಮಾನದ ಸೇಡು ತೀರಿಸುವದೂ ಆಯಿತು! ನನ್ನ ಕಾರ್ಯಕೌಶಲ್ಯವನ್ನು ಪರೀಕ್ಷಿಸಿ ಬಿಡಿರಿ."

"ಆಗಲಿ, ನೀವಾಗಿಯೇ ನನ್ನನ್ನು ಮೇಲಕ್ಕೆತ್ತುತ್ತಿರುವಾಗ, ನಿಮ್ಮ ಅಭಿಪ್ರಾಯವನ್ನು ನಾನೇಕೆ ಸಮ್ಮತಿಸದಿರಬೇಕು? ಜನ್ಮದಾರಭ್ಯ ಹಂಬಲಿ

ಸಿದ ರಾಜ್ಯಾಧಿಕಾರ ಇಂದು ಬರುತ್ತಿದ್ದರೆ ಏಕೆ ಬೇಡ? ಅದೊಂದು ಆಸೆಯನ್ನು ಮನದಲ್ಲಿಟ್ಟುಕೊಂಡು ಸಾಯುವದು ಏಕೆ ?"

"ಒಡೆಯರೇ, ತಮ್ಮ ಈ ಹೃದಯ ವೇದನೆಗೆ ಕೊನೆಯಾಯಿತು. ಇನ್ನು ನಾಲ್ಕೆಂಟು ದಿನಗಳಲ್ಲಿ ತಾವು ಸಿಂಹಾಸನಾರೂಢರಾದಿರೆಂದೇ ತಿಳಿಯಿರಿ."

ಹೀಗೆನ್ನುತ್ತ ಉತ್ಸಾಹದಿಂದ ಎದ್ದು ನಿಂತನು ಸದಾಶಿವನು. ಸ್ವಲ್ಪ ತಡೆದು ವೀರಒಡೆಯನು ಅನುಮಾನಿಸಿದವನಂತೆ ಮೆಲ್ಲನೆ ನುಡಿದನು.

"ನಾಯಕರೇ, ನಾನು ಇನ್ನೊಂದು ಕೇಳುತ್ತೇನೆ. ದಿಕ್ಕಿಲ್ಲದವರಿಗೆ ಸುತ್ತಲೂ ವಿಪತ್ತು! ಸಿಟ್ಟಾಗಬೇಡಿರಿ !"

"ಕೇಳಿರಿ ಒಡೆಯರೆ, ಸಿಟ್ಟೇನು ಇದರಲ್ಲಿ ?" ಎನ್ನುತ್ತ ಸದಾಶಿವನು ಪುನಃ ಕುಳಿತನು, ವೀರ ಒಡೆಯನು ತಡವರಿಸುತ್ತ ಕೇಳಿದನು.

"ನಿಮ್ಮ ಬಲದಲ್ಲಿ ನನಗೆ ನಂಬಿಗೆಯಿದೆ. ನಿಮ್ಮ ಈ ಮಾತನ್ನು ನಂಬಬಹುದೇ ? ಯಾಕಂದರೆ 'ಹಂಡೆ ಹಾಲಿಗೆ ಆಸೆಮಾಡಿ ಗಿಂಡಿ ನೀರನ್ನು ಕೂಡ ಕಳೆದುಕೊಂಡರು' ಎಂಬಂತೆ, ರಾಜ್ಯಕ್ಕೆ ಆಸೆಮಾಡಿ, ಅರಮನೆಯ ವಾಸಕೂಡ ತಪ್ಪಿ, ಸೆರೆಮನೆಯ ವಾಸ ನನ್ನ ಪಾಲಿಗೆ ಬಂದೀತು ! ಇದಕ್ಕಾಗಿ ಸ್ವಲ್ಪ ಭಯವೆನಿಸುವದು....."

ಸದಾಶಿವನ ಮನಸ್ಸಿಗೆ ಆಘಾತವಾಯಿತಾದರೂ, ಕಾರ್ಯಾತುರದಲ್ಲಿ ಅದನ್ನು ಗಮನಿಸದೆ ಗಂಭೀರವಾಗಿಯೇ ನುಡಿದನು :

"ನನ್ನ ಮಾತಿನಲ್ಲಿ ಅವಿಶ್ವಾಸವೇ ಒಡೆಯರೆ ? ನಾನು...."

"ಇಲ್ಲ, ಅವಿಶ್ವಾಸದ ಮಾತಲ್ಲ! ನನ್ನ ದುರ್ದೈವದ ಆಳ ದೊಡ್ಡದು ! ನನ್ನ ಅವಯವಗಳೂ ನನ್ನ ಮೇಲೆ ಮುನಿಸುಗೊಂಡಂತಿವೆ. ಈ ಗೋಡೆ ಕಂಬಗಳೂ ನನಗೆ ಮೋಸ ಮಾಡುವಂತೆ ತೋರುತ್ತದೆ. ಈ ಪರಿಸ್ಥಿತಿಯ ದೋಷದಿಂದ ಭಯವೆನಿಸುತ್ತದೆ. ಅದಕ್ಕಾಗಿ ಕೇಳಿದೆನು; ಬೇರೆ ಏನೂ ಇಲ್ಲ."

"ನೀವು ಹೇಗೆಯೇ ಕೇಳಲಿ, ನಿಮ್ಮ ಮನಸ್ಸಿನಲ್ಲಿ ಸಂಶಯವೂ ಭಯವೂ ಉತ್ಪನ್ನವಾಗುವದು ಸಹಜ ! ಅವುಗಳ ನಿವಾರಣೆಗಾಗಿ ನಾನು ಈಗ ಪ್ರತಿಜ್ಞೆ ಮಾಡಿ ಹೇಳುತ್ತೇನೆ."

"ಬೇಡ ಬೇಡ, ನಿಮ್ಮ ಮಾತಿನಲ್ಲಿ ನನಗೆ ವಿಶ್ವಾಸವಿದೆ."

"ಇರಲೊಲ್ಲದೇಕೆ, ನಾನೀಗ ಪ್ರತಿಜ್ಞೆ ಮಾಡಿಯೇ ಹೇಳುತ್ತೇನೆ. ಜಗದೀಶ್ವರನ ಸಾಕ್ಷಿಯಾಗಿ ನಿಮಗೆ ಈ ರಾಜ್ಯದ ಪಟ್ಟಗಟ್ಟುವೆನು. ನೀವು ನಿಶ್ಚಿಂತರಾಗಿರಿ. ಸ್ವಲ್ಪವೂ ಭಯಪಡಬೇಡರಿ."

"ಇಷ್ಟು ಹೇಳಿದ ಬಳಿಕ ನನಗಿನ್ನು ಸಂಶಯವೆಲ್ಲಿ? ಈಗ ನಾನು ನಿಮ್ಮವನು. ನೀವು ಏನನ್ನಾದರೂ ಮಾಡಿರಿ. ನಿಮ್ಮ ಶೌರ್ಯ-ಚಾತುರ್ಯಗಳ ಸಹಾಯ:ದಿಂದ ನಾನು ನನ್ನ ಅರಸುತನವನ್ನು ಪಡೆದೆನೆಂದರೆ, ದೊರೆಯದೆ ಹೋದ ನಿಮ್ಮ ಮಂತ್ರಿಪದವನ್ನು ನೀವೂ ಪಡೆಯುವಿರಿ. ಈ ಕೆಲಸದಲ್ಲಿ ನಿಮಗೆ ಸಹಾಯಮಾಡುವ ನಿಮ್ಮ ಮಿತ್ರರಿಗೆಲ್ಲ ನೀವೇ ನಿಮ್ಮ ಮನಸ್ಸಿಗೆ ಬಂದಂತೆ ಅಧಿಕಾರಗಳನ್ನು ಬಹುಮಾನಗಳನ್ನು ಕೊಡಬಹುದು."

"ಮಂತ್ರಿಪದವನ್ನು ನೀವು ನನಗೆ ಕೊಡಬಹುದು, ಬಿಡಬಹುದು, ಸ್ವಾಮಿಯವರ ಹಿತವಾದರೆ ಸಾಕು! ಆದರೊಡನೆ ನನ್ನ ಅಪಮಾನಕ್ಕೆ ಪರಿಹಾರವೂ ಇದೆ. ನನಗೆ ಹೆಚ್ಚಿನವೇನೂ ಬೇಕಾಗಿಲ್ಲ."

"ನನ್ನ ಪುಣ್ಯಕ್ಕೆ ಎಣೆಯಿಲ್ಲ. ನಾನು ನಿಶ್ಚಯವಾಗಿಯೂ ಯಶಸ್ವಿಯಾಗುವೆನು. ನಾಯಕರೇ ನೀವು ಈಗ ಸರ್ವಾಧಿಕಾರಿಗಳು, ನೀವು ಮಾಡಿದ್ದೇ ಮಾರ್ಗವು. ನಾನು ನಿಮ್ಮ ಅನುಯಾಯಿ. ಈಗ ನೀವು ಬೇಕಾದುದನ್ನು ಮಾಡಹೋಗಿರಿ."

"ಈ ನಂಬಿಗೆಗೆ ತಕ್ಕ ಸೇವೆಯನ್ನು ಯಾವಾಗ ಮಾಡೇನೆಂದು ಮನಸ್ಸು ಹಾತೊರೆಯುತ್ತಿದೆ ಒಡೆಯರೇ! ನನ್ನ ಕಾರ್ಯಸಾಧನೆಯನ್ನು ಈಗೇನು ಹೇಳಲಿ! ತಾವೇ ನೋಡುವಿರಂತೆ! ನಾಳೆಯೇ ಬೆಳಗಿನಲ್ಲಿ ಪಟ್ಟಾಭಿಷೇಕವನ್ನು ಏರ್ಪಡಿಸುತ್ತಿದ್ದೆನು. ವೀರಭದ್ರನ ಪಕ್ಷದ ಲಿಂಗರಾಜನೊಬ್ಬನಿದ್ದಾನೆ. ಅವನಿಗೆ ಮಂಕುಬೂದಿಯನ್ನೆರಚಿ, ಅವನನ್ನು ಹೊರಗೆ ಕಳಿಸಲು ಎರಡು ದಿವಸ ಹಿಡಿಯಬಹುದು. ಅಷ್ಟರಲ್ಲಿ ತಮ್ಮ ಅರಸೊತ್ತಿಗೆಯನ್ನು ಪ್ರಕಟಿಸುವ ರಾಯಸವನ್ನು ತಯಾರಿಸುವೆನು. ದಳನಾಯಕರಿಗೆಲ್ಲ ತಮ್ಮದೊಂದು ಸಂದೇಶವನ್ನು ಬರೆಯಿಸುವೆನು. ಇವೆರಡು ಆಜ್ಞೆಗಳಿಗೆ ತಮ್ಮ ಅಂಕಿತ ಪಡೆಯಲು, ಎರಡು ದಿನ ಬಿಟ್ಟು ಬಂದು ಮತ್ತೆ ಕಾಣುವೆನು. ಒಡೆಯರೇ, ಇನ್ನು ನಾನು ಹೋಗಲೇ? ಸ್ವಸ್ಥವಾಗಿ ಮಲಗಿರಿನ್ನು!"

"ಇನ್ನೇನು? ನಿಶ್ಚಿಂತೆ! ಸ್ವಸ್ಥವಾಗಿರುವೆನು. ಒಳ್ಳೇದು ಹೋಗಿ ಬನ್ನಿರಿ."

ಸದಾಶಿವನು ಮಂದಿರದಿಂದ ಹೊರಬಿದ್ದು ಬಂದನು. ವೀರ ಒಡೆಯನು ಒಪ್ಪಿದ್ದರಿಂದ ಉತ್ಸಾಹ, ಹೊಣೆಹೊತ್ತ ಕಾರ್ಯಭಾರದ ಚಿಂತೆ, ತನಗಲ್ಲದ ವರಿಗೆ ಕೇಡು ಸಾಧಿಸುವ ಈರ್ಷೆ, ಈ ತಾಮಸ ಭಾವನೆಗಳ ತಾಕಲಾಟದಲ್ಲಿ ಹೊರಗಿರುವ ಕತ್ತಲೆಯನ್ನು ಲಕ್ಷಿಸದೆ ಇದ್ದನು. ನಡಿಗೆಯನ್ನರಿಯದೆ ನಡೆದು ಬಂದು ತನ್ನ ಕೋಣೆಯನ್ನು ಮುಟ್ಟಿದನು. ಬಾಗಿಲು ತೆರೆದು ಮಂಚದ ಮೇಲೆ ಕುಳಿತನು. ಕೆಟ್ಟ ಕೆಲಸದ ಗತಿಯು ವೇಗವಾಗಿಯೇ ಇರುವದು. ಸದಾಶಿವನ ಮೋಸದ ಕೆಲಸಗಳ ಗತಿಯು ಹಾರಿ ಮುಂದುವರಿಯಿತು. ಆಗ ಮಲಗಿಕೊಳ್ಳುವದು ಅವನಿಗೆ ಸರಿಯಾಗಿ ಕಾಣಲಿಲ್ಲ. ಇದೇ ಸಮಯದಲ್ಲಿ ತನ್ನ ವಿಚಾರಗಳನ್ನೆಲ್ಲ ಪುಟ್ಟಣ್ಣನಿಗೆ ತಿಳಿಸಿ, ಹೆಣೆದ ಬಲೆಯನ್ನು ನಾಳೆಯೇ ಹರಹುವದು ಎಂದು ಎಣಿಕೆ ಹಾಕುತ್ತ ಹೊರಬಿದ್ದು ಪುಟ್ಟಣ್ಣನ ಮನೆಗೆ ಬಂದನು.

ಇತ್ತ ಹಸಿದು ಹಂಬಲಿಸುವವನಿಗೆ ಹೋಳಿಗೆ ಪಾಯಸ ಬಡಿಸಿದಂತಾಯಿತು ವೀರ ಒಡೆಯನಿಗೆ! ಆನಂದ ಪರವಶತೆಯಲ್ಲಿ ಶಾರೀರಿಕ ವೇದನೆಯು ಕೊಂಚ ಕಡಿಮೆಯೆನಿಸಿರಬಹುದು. ಆಯಾಸವಿಲ್ಲದೆ ಚಟ್ಟನೆ ಎದ್ದು ಕುಳಿತನು. ಮನದಲ್ಲಿ ಮೂಡಿದ ರಾಜ್ಯವೈಭವಗಳನ್ನು ಕಣ್ಣು ಮುಚ್ಚಿ ನೋಡಿದನು. ನಾನು ಯಾವ ರಾಜಾಧಿಕಾರಕ್ಕಾಗಿ ಹಲವು ಕಾಲ ತಳಮಳಿಸಿ ಕೊನೆಗೆ ಬದುಕಲು ಕೂಡ ಬೇಸರಗೊಂಡಿದ್ದೆನೋ, ಯಾವ ರಾಜಾಧಿಕಾರಕ್ಕಾಗಿ ಕಕ್ಕನಲ್ಲಿ ಕೂಡ ದ್ವೇಷವನ್ನು ತಾಳಿದೆನೋ ಆ ರಾಜಾಧಿಕಾರವು ಈಗ ನನ್ನ ಹಸ್ತಗತವಾಗಲಿದೆ. ಸರ್ವೇಶ್ವರನು ನನ್ನ ಮೇಲೆ ದಯಮಾಡಿದನು. ನನ್ನ ಭಾಗ್ಯದ ಬಾಗಿಲು ತೆರೆಯಿತು. ಎಂದು ಮನದಲ್ಲಿಯೇ ಅಂದುಕೊಂಡನು.

—

## ೪. ಬಯಸಿ ಬೇಡಿದ ರಾಜಪದವಿ

ರಾಜಧಾನಿ ಇಕ್ಕೇರಿಯ ರಕ್ಷಣೆಗೆ ಉಳಿದಿದ್ದ ಲಿಂಗರಾಜನು ಮಹಾ ಶೂರನು. ವೆಂಕಟನಾಯಕನ ಪ್ರಬಲ ಆಳಿಕೆಯ ಹಲವು ಯುದ್ಧಗಳಲ್ಲಿ ಪಳಗಿದವನು. ವೀರಭದ್ರನಾಯಕನ ಪರಮ ಆಪ್ತನಂತಿದ್ದನು. ಶಂಕರನಾರಾಯಣ ಹಾಗು ಲಿಂಗರಾಜ ಈ ಎರಡು ಮಾನವ ಮಣಿಗಳಿಂದಲೇ ವೀರಭದ್ರನ ಹೆಸರು ಪಸರಿಸಿದುದು. ದಕ್ಷಿಣದ ಪಾಳಯಗಾರರು ನಾಯಕರು ಒಡೆಯರು ಯಾರೂ ಲಿಂಗರಾಜನಿಗೆ ಎದುರಾಗಿ ಪಾರಾಗುತ್ತಿರಲಿಲ್ಲ. ವಿಜಾಪುರ ಬಾದಶಹನ ಸೈನ್ಯಕ್ಕೂ ಅವನು ಹೆದರಿರಲಿಲ್ಲ. ಸದಾಶಿವನು, ಕಡುಗಲಿಯಾದರೂ ಆತನು ಲಿಂಗರಾಜನ ಸಾಮರ್ಥ್ಯಕ್ಕೆ ಅಂಜಿ, ಒಮ್ಮೆಲೇ ತನ್ನ ಆಟವನ್ನು ಹೂಡದಂತಾಗಿದ್ದನು. ಲಿಂಗರಾಜನಲ್ಲದೆ ಬೇರೆ ಯಾರಾದರೂ ರಾಜಧಾನಿಯ ರಕ್ಷಣೆಗೆ ನಿಯಮಿಸಲ್ಪಟ್ಟಿದ್ದರೆ, ಸದಾಶಿವನು ಇಷ್ಟರಲ್ಲಿ ವೀರ ಒಡೆಯನಿಗೆ ಪಟ್ಟಾಭಿಷೇಕ ಮಾಡಿಬಿಡುತ್ತಿದ್ದನು; ತನ್ನ ಆಡಳಿತವನ್ನು ಸಾಗಿಸಿಬಿಡುತ್ತಿದ್ದನು. ಲಿಂಗರಾಜನ ಎದುರು ನಿಲ್ಲುವದು ಅಸಾಧ್ಯವಾದ್ದರಿಂದಲೇ ಅವನನ್ನು ತಂತ್ರದಿಂದ ಹೊರಗೆ ಹಾಕುವ ಹೂಟವನ್ನು ಹೂಡಿದ್ದನು.

ಸದಾಶಿವನ ಗುಪ್ತಕಾರಸ್ಥಾನದ ಗಂಧ ಹೊರಗೆ ಸುಳಿದಿರಲಿಲ್ಲ. ಆದರೂ ಅಸಂತುಷ್ಟನಾದ ಈತನ ನಿತ್ಯದ ಚಟುವಟಿಕೆಗಳನ್ನು ಲಿಂಗರಾಜನು ಸೂಕ್ಷ್ಮನಾಗಿ ನಿರೀಕ್ಷಿಸುತ್ತಿದ್ದನು. ಇರಇರುತ್ತ ಸದಾಶಿವನ ಅನುಯಾಯಿಗಳು ವಿಶೇಷ ಕಾರ್ಯನಿರತರಂತೆ ತೆರಪಿಲ್ಲದೆ ಅಲೆದಾಡಹತ್ತಿದರು. ಇದರಿಂದ ಒಳಗೇನೋ ಹೊಗೆಯಾಡುತ್ತಿದೆಯೆಂಬ ಸಂದೇಹವೂ ಅವನಿಗೆ ಬಾರದಿರ

ಲಿಲ್ಲ. ಆದರಿಂದ ಅವರ ಸಂಬಂಧದಲ್ಲಿ ಎಚ್ಚರದಿಂದ ನಡೆಯತೊಡಗಿದನು. ತನ್ನ ಭಟನಾಯಕರನ್ನು ಮೇಲೆ ಮೇಲೆ ಕಂಡು ಸೈನ್ಯದ ಓರಣವನ್ನು ಕಾಯ್ದುಕೊಂಡನು, ಗುಪ್ತಚಾರರನ್ನು ಹೆಚ್ಚಿಸಿದನು. ತನ್ನ ಸಂದೇಹವು ಬಲಪಟ್ಟಿತಾದರೂ ಸದಾಶಿವನ ಗುಟ್ಟು ಪ್ರಮಾಣಿತವಾಗಿ ಒಮ್ಮೆಲೇ ಗೊತ್ತಾಗಲಿಲ್ಲ. ಆದರಿಂದ ಲಿಂಗರಾಜನಿಗೆ ಬಹಳ ತೊಂದರೆಯಾಯಿತು ಸದಾಶಿವನನ್ನು ಬಂಧನಗೊಳಿಸಲೂ ಬಾರದು; ಅವನು ಅರಸನ ಭಾವ ಮೈದುನನು; ಬಿಟ್ಟರೆ ರಾಜ್ಯಕ್ಕಾವ ಹಾನಿಯೋ ತಿಳಿಯದು. ಲಿಂಗರಾಜನು ಇಬ್ಬಗೆಯ ಸಂಕಟಕ್ಕೊಳಗಾದನು.

ಇಂದು ಪ್ರಾತಃಕಾಲದ ಸಮಯದಲ್ಲಿ ಲಿಂಗರಾಜನು ಅದೇ ಬಂದು ದಳದ ಅಧಿಕರಣದಲ್ಲಿ ಕುಳಿತಿದ್ದನು. ದಳನಾಯಕರು ಬಂದು ಭೆಟ್ಟಿಯಾಗ ಹತ್ತಿದ್ದರು. ಅಷ್ಟರಲ್ಲಿ ರಾಹುತನೊಬ್ಬನು ಕುದರೆಯನ್ನೋಡಿಸುತ್ತ ಬಂದು ಬಾಗಿಲಲ್ಲಿ ನಿಲ್ಲಿಸಿ, ಒಮ್ಮೆಲೆ ಕೆಳಗೆ ಹಾರಿಕೊಂಡನು ಯಾವ ಅಡೆತಡೆ ಯನ್ನು ಲೆಕ್ಕಿಸದೆ ಆ ಚಾವಡಿಯನ್ನು ಪ್ರವೇಶಿಸಿ ಲಿಂಗರಾಜನ ಮುಂದೆ ಅಡ್ಡ ಬಿದ್ದನು. ಒಳಗಿದ್ದವರು ಚಕಿತರಾದರು. ಧಾವಿಸಿ ಬಂದದ್ದರಿಂದ ಅವನ ಮೈಯಲ್ಲಿ ನೀರೊಡೆದಿತ್ತು. ಆತುರದಿಂದ ಲಿಂಗರಾಜನೆಂದನು:

"ಏಳು, ಯಾರು ತಮ್ಮಾ ನೀನು ? ಗಾಬರಿಯಾಗಿರುವ ಕಾರಣ ವೇನು ?"

ಅವನು ಸಾವರಿಸಿಕೊಂಡೆದ್ದು ಅವಸರದ ಉಸಿರಿನಲ್ಲಿಯೇ ಹೇಳಿದನು:

"ಸ್ವಾಮೀ, ನಾನು ಕಂಡಲೂರವನು. ನನ್ನ ಹೆಸರು ಗಂಗಣ್ಣ !"

"ಕಂಡಲೂರವನು ? ಇದೇನು ನಿನ್ನ ಸಂಕಟ ? ಏನು ಸುದ್ದಿ ?"

"ಕಂಡಲೂರ ಮೇಲೆ ಭಂಡುಗಾರರ ದಾಳಿಯಾಗಿದೆ ಒಡೆಯರೇ, ನಮ್ಮ ನಾಯಕರು ಸರ್ವರೊಡನೆ ಅವರ ಸೆರೆಯಾಗಿರುವರು...."

"ಅದೆಂತು ಗಂಗಣ್ಣ ? ನಮ್ಮ ರಾಣಿಯವರ ಗತಿಯೇನು ?" ಮುಂದೆ ಸರಿದು ಕೇಳಿದನು.

"ಅವರಿಗೂ ತಂದೆಯವರೊಡನೆ ಬಂಧನ ಸ್ವಾಮೀ !"

"ಎಂತಹ ದುರ್ಘಟನೆಯಿದು ? ಆ ಯಾರು ಬಂಡುಗಾರರು ?"

"ನೀಲಗಿರಿಯೊಳಗಿನ ಮೈಪಿಲೀ ಬೇಡರ ಕಾಡು ಜನರು. ಅವರ ಅತ್ಯಾಚಾರವನ್ನು ಏನೆಂದು ಹೇಳಲಿ ?"

ಗಂಗಣ್ಣನ ಕಣ್ಣೀರು ಸುರಿಯುತ್ತಿದ್ದವು. ಬೆನ್ನಿಗೆ ಕಟ್ಟಿದ ಚೀಲದಿಂದ ಒಂದು ಪತ್ರವನ್ನು ತೆಗೆದು ಲಿಂಗರಾಜನಿಗೆ ಕೊಟ್ಟನು. ಲಿಂಗರಾಜನು ಆತುರದಿಂದ ಅದನ್ನು ಬಿಚ್ಚಿ ಓದಿದನು. ರಾಜನ ಮಾವನಾದ ಕಂಡಲೂರ ಚೆನ್ನನಾಯಕನು ಲಿಂಗರಾಜನಿಗೆ ಬರೆದಂತೆ ಹೀಗೆ:— "....ವೀರ ಸೇನಾಪತಿ ಲಿಂಗರಾಜರೇ, ಮೆಪಿಲೆಯ ದಾಳಿಯಲ್ಲಿ ನಮ್ಮ ದಳವು ನಾಶವಾಗಿ ನಾವು ಅವರ ಸೆರೆಯಾಗಿ ಅಪಾರ ಕಷ್ಟದಲ್ಲಿದ್ದೇವೆ. ನಿಮ್ಮ ಹೊರತು ರಕ್ಷಕರು ಯಾರೂ ಇಲ್ಲ. ಇಕ್ಕೇರಿಯ ರಾಜ್ಯದ-ರಾಜರ-ಹಿತಚಿಂತಕರಾದ ನೀವು-ನಮ್ಮ ಸಲುವಾಗಿ ಅಲ್ಲದಿದ್ದರೂ-ನಿಮ್ಮ ರಾಣಿಯವರ ಸಲುವಾಗಿಯಾದರೂ ಬಂದು ನಮ್ಮ ಬಂಧ ಮುಕ್ತ ಮಾಡಬೇಕು. ನಿಮ್ಮ ರಾಜರು ತೀರ್ಥರಾಜಪುರದಲ್ಲಿರುವದನ್ನು ಕೇಳಿದ್ದೇವೆ. ಅವರೆಡೆಗೂ ಭಟರನಟ್ಟಿರುವೆ. ಅವರ ಅಪ್ಪಣೆ ನಿಮಗೆ ದೊರೆತು ನೀವು ಹೊರಡಲು ತಡವಾದೀತೆಂದು ನಿಮಗೂ ಬೇರೆ ಬಿನ್ನವಿಸಿಕೊಂಡಿರುವೆ. ಅವಶ್ಯವೆನಿಸಿದರೆ ನಿಮ್ಮ ರಾಜರ ಆಜ್ಞೆಗಾಗಿ ನೀವು ಕಾಯಬಹುದು. ಮೈಪಿಲೆಯರ ಅತ್ಯಾಚಾರಗಳು ಅತಿಯಾಗಿವೆ!"

ವೀರಭದ್ರನಾಯಕನ ಪಟ್ಟಮಹಿಷಿ ಆಗ ಕಂಡಲೂರಲ್ಲಿ ತಂದೆಯ ಮನೆಯಲ್ಲಿಯೇ ಇದ್ದಳು. ಪತ್ರವನ್ನೋದಿ ಲಿಂಗರಾಜನಿಗೆ ಸಂತಾಪವಾಯಿತು. 'ಸೈನ್ಯದ ಸಿದ್ಧತೆಯಂತೂ ಆಗಲಿ! ಮುಂದಿನ ಆಜ್ಞೆಗಳಿಗೆ ಕಾಯಿರಿ' ಎಂದು ದಳನಾಯಕರನ್ನು ಕೂಡಲೇ ಕಳುಹಿದನು.

"ಗಂಗಣ್ಣ, ಎಲ್ಲ ಸಂಸ್ಥಾನಿಕರು ಈ ಪುಂಡರನ್ನು ಉಪೇಕ್ಷಿಸಿದುದೇ ಅವರ ಉಪಟಳಕ್ಕೆ ಕಾರಣವಾಗಿದೆ. ಇದಲ್ಲದೆ ಆ ಕಡೆಯ ಸಂಸ್ಥಾನಿಕರು ತಮ್ಮತಮ್ಮಲ್ಲಿಯ ದ್ವೇಷಸಾಧನೆಗೆ ಈ ಪುಂಡರನ್ನು ಉಪಯೋಗಿಸಿಕೊಂಡು ಪ್ರೋತ್ಸಾಹ ನೀಡಿದ್ದಾರೆ. ಇದರಿಂದ ಅವರ ಉನ್ಮತ್ತತನದ ಮೇರೆ ಮೀರಿದೆ. ಈ ದಾಳಿಗೂ ಯಾವ ಸಂಸ್ಥಾನಿಕನಾದರೂ ಬೆಂಬಲಕೊಟ್ಟಿದ್ದುಂಟೇ?"

"ಅದೇನೂ ತಿಳಿಯದು ಸ್ವಾಮೀ! ಆಕಸ್ಮಿಕವಾಗಿ ಬಂದೊದಗಿತು ಈ ಆಪತ್ತು!"

"ಆ ಬಂಡುಗಾರರು ಎಷ್ಟು ಜನರಿರಬಹುದು?"

"ಸಾವಿರಗಟ್ಟಲೆ ಇದ್ದಾರು."

"ನೀವು ಅವರನ್ನು ಎದುರಿಸಲಿಲ್ಲವೇ?"

ಏನು ಎದುರಿಸಬೇಕು ಸ್ವಾಮೀ, ಅವರು ಬರುವದು ಮೊದಲು ತಿಳಿದರೆ ಮಾತ್ರ ಅಲ್ಲವೇ? ನಮ್ಮ ದ್ರೋಹಿಗಳು ಅವರಿಗೆ ನಮ್ಮ ದುರ್ಗದ ರಹಸ್ಯ ಮಾರ್ಗಗಳನ್ನು ತಿಳಿಸಿರಬೇಕು. ಅವರು ರಾತ್ರಿಯಲ್ಲಿ ಒಮ್ಮೆಲೇ ಊರಲ್ಲಿ ಬಂದರು. ಫಕ್ಕನೆ ಅರಮನೆಯ ಮೇಲೆ ಬಿದ್ದು ಎಲ್ಲರನ್ನು ಬಂಧಿಸಿದರು. ಯುದ್ಧಸನ್ನದ್ಧರಾಗಿರದ ನಮ್ಮ ದಂಡಾಳುಗಳು ಬಂಡುಗಾರರಿಂದ ಮಾರಿಗೆ ಬಲಿಯಾದರು. ನಾನೂ ಸೆರೆಯಾದವನೇ! ನಾಯಕರ ಪತ್ರಗಳನ್ನು ತಮಗೂ ತಮ್ಮ ರಾಜರಿಗೂ ಮುಟ್ಟಿಸಲು ಇಬ್ಬರು ಯುಕ್ತಿಯಿಂದ ಪಾರಾಗಿ ಬಂದಿದ್ದೇವೆ.

"ಒಳ್ಳೇದು, ನೀನು ಉಂಡು ವಿಶ್ರಾಂತಿಗೊಳ್ಳು! ನಾನು ಮುಂದಿನ ವ್ಯವಸ್ಥೆಯನ್ನು ಮಾಡುವೆನು."

ಗಂಗ ಪರಿಚಾರಕರೊಡನೆ ನಡೆದನು. ಲಿಂಗರಾಜನು ತನ್ನ ಮಂತ್ರಾಗಾರಕ್ಕೆ ಬಂದು ಆಲೋಚಿಸತೊಡಗಿದನು. ಕೂಡಲೆ ಸದಾಶಿವನ ಸಂಚಿನ ಸಂಶಯವು ಮುಂದೆ ಬಂದಿತು. 'ಸಕಲಬಲದೊಡನೆ ಆತ್ತಹೋದಾಗ ಇವನು ಎಲ್ಲಿ ಏನಾದರೂ ಕ್ರಾಂತಿಮಾಡಿದರೆ ಏನು ಮಾಡುವದು?' ಎಂಬ ವಿಚಾರದೊಡನೆ ಅವನ ಮನಸ್ಸು ಹರಿಯಹತ್ತಿತು. ಅಸಮಾಧಾನದಲ್ಲಿಯೂ ಸಂಶಯಾಸ್ಪದ ಚಟುವಟಿಕೆಗಳಲ್ಲಿಯೂ ಇರುವ ಸದಾಶಿವನನ್ನು ಅವನ ಅನುಯಾಯಿಗಳನ್ನು ಅಲಕ್ಷಿಸುವಂತಿರಲಿಲ್ಲ. ಕಂಡಲೂರವರ ಸಹಾಯಕ್ಕೆ ಹೋಗುವದನ್ನು ಬಿಡಬೇಕೇ? ಅವರ ಗತಿಯೇನು? ಅದಕ್ಕೂ ವಿಲಂಬವಾಗುವಂತಿಲ್ಲ. ದಳದಲ್ಲಿ ಎರಡು ಭಾಗ ಮಾಡಿದರೆ ಎರಡೂ ಕಡೆ ಕೆಲಸ ಕೆಟ್ಟೀತು! ಈ ವಿಚಾರಗಳಿಂದ ಆತನು ಗೊಂದಲದಲ್ಲಿ ಬಿದ್ದನು. ನಿರ್ಣಯವನ್ನು ಸಂಜೆಯವರೆಗೆ ಮುಂದೂಡಿ ಆಜ್ಞೆಗೆ ಕಾಯ್ದು ಕುಳಿತ ದಳವಾಯಿಗಳಿಗೆ ಹಾಗೆ ತಿಳಿಸಿದನು. ವ್ಯರ್ಥವಾಗಿ ಕಾಲಕಳೆದವನೂ ಅವನಲ್ಲ! ಇಷ್ಟರಲ್ಲಿ ನಿರ್ಣಯಿಸತಕ್ಕವನು. ಅಷ್ಟರಲ್ಲಿ ತೀರ್ಥರಾಜಪುರದಿಂದ ರಾಹುತ ಹರಿಕಾರನೊಬ್ಬನು ಒಂದು ಪತ್ರದೊಡನೆ ಬಂದನು. ಅದರಲ್ಲಿಯೂ ಇದೇ ಸಂಗತಿ! ವೀರಭದ್ರನಾಯಕನಿಂದ ಅದರ ಕೊನೆಯಲ್ಲಿ '........ರಾಜಧಾನಿಯ ರಕ್ಷಣೆಗೆ ಸದಾಶಿವನಾಯಕರನ್ನೂ ಅವರ ಸಹಾಯಕ್ಕೆ ಪುಟ್ಟಣ್ಣನನ್ನೂ ನಿಯಮಿಸಿ, ನಿಮ್ಮ

ಸೈನ್ಯದೊಡನೆ ಕೂಡಲೇ ಕಂಡಲೂರಿಗೆ ಹೋಗಿ ರಾಜಜನರನ್ನು ರಕ್ಷಿಸಿ ಕೊಂಡು ಬರಬೇಕು........' ಎಂದು ಸೇನಾಪತಿ ಲಿಂಗರಾಜನಿಗೆ ನಿಶ್ಚಿತವಾದ ಆಜ್ಞೆಯಿತ್ತು. ಲಿಂಗರಾಜನ ಬಗೆಯು ಭಾರ ಇಳಿಯಿತು. ಕೂಡಲೆ ಅವನು ದಳನಾಯಕರನ್ನು ಕರೆದು ಅವರವರ ಕೆಲಸಗಳನ್ನು ಒಪ್ಪಿಸಿಕೊಟ್ಟು ರಾಜಾಜ್ಞೆಯಂತೆ ಸೈನ್ಯಕ್ಕೆ ಪ್ರಯಾಣದ ಅಪ್ಪಣೆಕೊಟ್ಟನು. ಹಾಗೆ ಮರುದಿನ ಅರುಣೋದಯದಲ್ಲಿ ತನ್ನ ಸೈನ್ಯದೊಡನೆ ಕಂಡಲೂರ ಕಡೆಗೆ ನಡೆದನು.

ತನ್ನ ಕಪಟದ ಗಾಡಿಯು ತಡೆಯಿಲ್ಲದೆ ಸಾಗಿದುದಕ್ಕೆ ಸದಾಶಿವನಿಗೆ ಬಹಳ ಆನಂದವಾಗಿತ್ತು. ಈ ಆಟದ ಗುಟ್ಟು ಬಯಲಾಗಿ ಲಿಂಗರಾಜನು ಮರಳಿ ಬರುವ ಮೊದಲು-ಅರಸನಿಗೆ ಕ್ರಾಂತಿಯ ಸುಳಿವು ಹತ್ತುವ ಮೊದಲು -ವೀರಒಡೆಯನನ್ನು ಪಟ್ಟಕ್ಕೆ ಕೂಡ್ರಿಸಿ ರಾಜಸೂತ್ರವನ್ನು ತನ್ನ ಕೈಯಲ್ಲಿ ತೆಗೆದುಕೊಳ್ಳಬೇಕೆಂದು ಅವಸರಕ್ಕೆ ಮೊದಲುಮಾಡಿದನು. ಆ ದಿನ ಇಳಿ ಹೊತ್ತಿನಲ್ಲಿ ಸದಾಶಿವನ ಅನುಯಾಯಿಗಳ ಒಡನಾಟವು ಭರದಿಂದ ನಡೆಯಿತು ಆ ವಂಚಕರ ಏಳಿಗೆಯನ್ನು ನೋಡಿ ಸಹಿಸಲಾರದವನಂತೆ ಸೂರ್ಯದೇವನು ತೇಜೋಹೀನನಾಗಿ ಕೂಡಲೆ ಪಶ್ಚಿಮ ಗಿರಿಯಲ್ಲಿ ಮರೆಯಾದನು. ದುರ್ಜನರ ದುಷ್ಟಕಾರ್ಯಗಳನ್ನು ನಿಗ್ರಹಿಸುವದಾಗದಿದ್ದರೆ, ಸಜ್ಜನರು ಅವುಗಳನ್ನು ಅವಲೋಕಿಸುವದನ್ನಾದರೂ ಬಿಟ್ಟುಬಿಡುತ್ತಾರೆ. ಅಂತೆಯೇ ಸಜ್ಜನರಾದವರು ದುಷ್ಟರಿಂದ ದೂರಿರುತ್ತಾರೆ.

ರಾತ್ರಿಯ ಪ್ರಥಮ ಪ್ರಹರವು ಕಳೆಯಿತು. ಜನರ ಸುಳಿವು ಕಡಿಮೆಯಾಯಿತು. ಸದಾಶಿವನ ಸಮಾಜವು ಅರಮನೆಯ ಒಂದು ನಿರ್ಜನ ಮಂದಿರದಲ್ಲಿ ಕೂಡಿತು. ಅವರ ಈ ಸಮ್ಮೇಲನದಲ್ಲಿಯ ಆನಂದಾತಿಶಯವನ್ನು ಹೇಳತೀರದು ತಾವು ಮಾಡುವದೇ ಸರಿಯೆಂದೂ ತಮ್ಮನ್ನು ತಡೆಯುವರಾರೂ ಇಲ್ಲವೆಂದೂ ಅವರ ಭಾವನೆ! ಲಿಂಗರಾಜನನ್ನು ವಂಚಿಸಿದ ಚಾತುರ್ಯವನ್ನು ಅವರು ತಮ್ಮ ತಮ್ಮಷ್ಟಕ್ಕೆ ಹೊಗಳಿಕೊಂಡರು. ಒಬ್ಬನನು ತಾನು ಕಂಡಲೂರ ನಾಯಕರ ರಾಹುತನ ವೇಷವನ್ನು ಯಶಸ್ವಿಯಾಗಿ ಪೂರೈಸಿದುದನ್ನು ಕೊಚ್ಚಿಕೊಂಡನು. ಇನ್ನೊಬ್ಬನು ತಾನು, ರಾಜನ ಕಡೆಯಿಂದ ಬಂದವನಾಗಿ ಸೇನಾಪತಿಯನ್ನು ಒಮ್ಮಿಂದೊಮ್ಮೆ ಹೊರಡಿಸಿದೆನೆಂದು ಉಬ್ಬುಬ್ಬಿ ಹೇಳಿಕೊಂಡನು. ಮತ್ತೊಬ್ಬನು ಆ

ಎರಡೂ ಪತ್ರಗಳಿಗೆ ಭೇದ ಕಾಣದಂತೆ ಮುದ್ರಾಂಕಿತ ಹಾಕಿದ ಕುಶಲತೆಯನ್ನು ಮೆರೆಸಿದನು. ಈ ರಗಳೆ ಕೊನೆಯಿಲ್ಲದೆ ನಡೆಯಲು ಸದಾಶಿವನು ಅವರನ್ನು ಎಚ್ಚರಿಸಿದನು. ಕಾರ್ಯಾಲೋಚನೆಗೆ ಆರಂಭವಾಯಿತು. ಅವರು ಬಹಳ ಹೊತ್ತಿನವರೆಗೆ ಮಾತನಾಡಿ ತಾವು ತಾವು ಮಾಡತಕ್ಕ ಕೆಲಸಗಳನ್ನು ನಿಯಮಿಸಿಕೊಂಡರು. ಬಳಿಕ ಅವರು ವೀರಒಡೆಯರನ್ನು ಕಾಣಲು ಅವರ ಮಂದಿರದ ಕಡೆಗೆ ನಡೆದರು.

ಆ ದಿವಸ ವೀರಒಡೆಯನ ರೋಗ ತನ್ನ ಪ್ರಮಾಣವನ್ನು ಬಹುಮಟ್ಟಿಗೆ ಬೆಳೆಸಿತ್ತು. ಬಹು ದಿವಸಗಳ ಆಧಿ-ವ್ಯಾಧಿಗಳಿಂದ ಅವನ ಬುದ್ಧಿ ಭಾವನೆಗಳೂ ಶರೀರವೂ ಮೊದಲೇ ಕೊಳೆತ ಹಂಣಿನಂತಾಗಿದ್ದವು. ಕ್ರಾಂತಿಯ ವಿಚಾರಗಳನ್ನು ಅರಗಿಸಿಕೊಳ್ಳುವ ಕೆಚ್ಚು ಎಲ್ಲಿಂದ ಬರಬೇಕು? ಸದಾಶಿವನು ಅಂಟಿಸಿದ ಆಸೆಗೆ ಮನಸ್ಸು ಒಪ್ಪಿದ್ದರೂ, ವೀರಭದ್ರನ ವಿರೋಧದಿಂದ ಅಂತ್ಯದಲ್ಲಿ ತನ್ನ ಅವಸ್ಥೆ ಇನ್ನೂ ಕೀಳಾದಿತೆಂಬುದರ ಭಯವು ಒಳಬಿಗೆಯನ್ನು ಹಣ್ಣು ಮಾಡಿ ರೋಗವನ್ನು ಹೆಚ್ಚಿಸಿದ್ದಿತು. ಆದರೂ ನಾಲ್ಕೊಪ್ಪತ್ತಾದರೂ ಅರಸೊತ್ತಿಗೆಯನ್ನು ಅನುಭವಿಸೇನೆಂಬದರ ಮೋಹವು ಬಿಡದಾಗಿದ್ದಿತು. ಆತನು ಸಣ್ಣಾಗಿ ನರಳುತ್ತ ಅಂಗಾತ ಮಲಗಿದ್ದನು. ಆಗ ಸದಾಶಿವನು ಮುಗುಳು ನಗೆ ನಗುತ್ತ ಒಳಗೆ ಬರಲು ಒಡೆಯನ ಮುಖವು ಅರಳಿ ಅಗಲವಾಯಿತು. ಆತನು ಸದಾಶಿವನಿಗೆ ಆಸನವನ್ನು ತೋರಿಸುತ್ತ ಅವನ ಕಡೆಗೆ ಮುಖಮಾಡಿ ಹೋಳು ಮಗ್ಗುಲಿನಿಂದ ಮಲಗಿಕೊಂಡನು.

"ಒಡೆಯರೇ, ಸುಯೋಗವು ಒದಗಿ ಬಂದಿದೆ; ತಾವು ಸಿದ್ಧರಿರಬೇಕು."

"ನಾನು ಸಿದ್ಧನೇ ಇದ್ದೇನೆ. ವೇಳೆ ಅನುಕೂಲವಾಗಿದೆಯೇ? ನಿಮ್ಮ ಬಲ ಬೆಳೆದಿದೆಯೇ?"

"ಅದರಲ್ಲೇನು ಅನುಮಾನ? ಇಕೋ ನೋಡಿರಿ ನಿಮ್ಮ ಸ್ವಾಮಿನಿಷ್ಠ ಭಟನಾಯಕರ-ಅಧಿಕಾರಿಗಳ ಉತ್ಸುಕತೆಯನ್ನು! ನನ್ನ ಬೆನ್ನ ಹಿಂದೆಯೇ ಬಂದಿರುವರು."

ಸಾಲಾಗಿ ಬಂದು ವಂದನೆಗೈದು ನಿಲ್ಲುತ್ತಿದ್ದ ಕಾರ್ಯಕರ್ತರನ್ನು ನೋಡಿ ವೀರ ಒಡೆಯನು ಅಂದನು :

"ನಿಮ್ಮ ಸ್ವಾಮಿಯ ಸ್ಮರಣ ಇಂದಾದರೂ ಆಯಿತು. ಅದು ನನ್ನ ಪುಣ್ಯವೆಂತಲೇ ತಿಳಿಯುತ್ತೇನೆ."

"ಯಾವಾಗಲೂ ಇದೆ ಸ್ಮರಣ ಒಡೆಯರೇ. ವೈರಿಯ ನಾಶಕ್ಕಾದರೂ ಸಮಯವು ಸಾಧಿಸಿ ಬರಬೇಕು. ಈಗ ಬಂದಿದೆ ಆ ವೇಳೆಯು!"

ಪುಟ್ಟಣ್ಣನ ಈ ಮಾತಿನಿಂದ ಒಡೆಯನು ಅವನನ್ನು ನೋಡಿ ನುಡಿದನು:

"ಹಾಗಾದರೆ ಈಗ ಕಾಲವು ಅನುಕೂಲವಾಗಿರುವದಷ್ಟೆ? ಆದದ್ದು ಸುರಕ್ಷಿತವಾಗಿ ಉಳಿಯಬೇಕು. ಇಲ್ಲದಿದ್ದರೆ ಉಪಯೋಗವೇನು? ಹೆಚ್ಚಿನ ಅನರ್ಥಕ್ಕೆ ಪಾತ್ರವಾಗಬೇಕಾದೀತು! ವೀರಭದ್ರನಾಯಕನೂ ಲಿಂಗ ರಾಜನೂ ಏಕಕಾಲಕ್ಕೆ ಎದುರು ನಿಂತರೆ ಏನು ಗತಿಯಾದೀತು!"

ಈ ಸಂದೇಹ ನಿವಾರಣೆಗೆ ಸದಾಶಿವನು ಆತುರದಿಂದ ಹೇಳಿದನು:

"ಛೀ ಛೀ, ನೀವು ಅದರ ಚಿಂತೆಯನ್ನೇ ಬಿಡಿರಿ. ಅವರಿಬ್ಬರು ತಿರುಗಿ ಇಕ್ಕೇರಿಯನ್ನು ಕಾಣದಂತೆ ಮಾಡುವದು ನಮ್ಮನ್ನು ಕೂಡಿದೆ."

"ಹೌದು ಪ್ರಭುಗಳೇ, ನಿಮ್ಮ ರಾಜ್ಯವು ನಿಷ್ಕಂಟಕವಾದುದೆಂದು ತಿಳಿಯಿರಿ. ಕುಶಲಮತಿ ಸದಾಶಿವನಾಯಕರಂಥ ಮಂತ್ರಿಗಳು ಆಡಳಿತ ವಹಿಸಿದ ಮೇಲೆ ಯಾರೂ ಎದುರು ನಿಂತು ಪಾರಾಗರು."

ಸದಾಶಿವನಿಗೆ ನೆರವಾಗಿ ನುಡಿದನು ಪುಟ್ಟಣ್ಣನು.

"ನೀವು ಅಪೂರ್ಣ ಮಾತನ್ನಾಡಿದಿರಿ 'ಸದಾಶಿವರಾಯರಂಥ ಮಂತ್ರಿಗಳು, ಪುಟ್ಟಣ್ಣರಾಯರಂಥ ಸೇನಾಪತಿಗಳು ರಾಜ್ಯಭಾರ ವಹಿಸಿದ ಮೇಲೆ ........' ಎಂದು ಹೇಳಿರಿ"

ತುಂಬಿದೆದೆಯಿಂದ ಮುಖವರಳಿಸಿ ಮಾತಾಡಿದನು ವೃದ್ಧರಾಜನು; ಸದಾಶಿವನು ಚಟ್ಟನೆ ಎದ್ದು ನಿಂತು ನುಡಿದನು:

"ಸೈ, ಸೈ, ಒಡೆಯರೇ, ಪುಟ್ಟಣ್ಣ ಹೊಣೆಯಿಂದ ಹೋಳಾಗಬೇಕೆನ್ನುತ್ತಿದ್ದನು. ತಾವು ಯೋಗ್ಯವಾದ ಅಪ್ಪಣೆ ಮಾಡಿದಿರಿ. ಪುಟ್ಟಣ್ಣಾ, ನಿನ್ನ ಮೇಲೆಯೂ ಒಂದು ಹೊಣೆಗಾರಿಕೆಯು ಇದ್ದದ್ದೇ!"

"ಇರಲಿ! ಒಡೆಯರ ಸೇವೆಯೆಂದು ನಾನೂ ಅದನ್ನು ಮನಃಪೂರ್ವಕವಾಗಿ ಮಾಡುವೆನು. ಒಡೆಯರು ತಾವಾಗಿ ಕರುಣಿಸಿದ ಪದವಿಯನ್ನು ಬಿಡುವದಾದರೂ ಏಕೆ?"

"ನೀವೇ ನಿಂತು ನಡಿಸುವವರು; ನಾನು ಮಾಡುವವನೇ? ಈಗ ಎಲ್ಲ ವ್ಯವಸ್ಥೆ ಮಾಡಿಕೊಂಡಿರುವಿರಾ ?"

"ಎಲ್ಲವೂ ಮುಗಿದಿದೆ. ನಾಳೆಯು ಒಳ್ಳೆಯ ಮುಹೂರ್ತದಲ್ಲಿ ಪಟ್ಟಾಭಿಷೇಕ! ತಮ್ಮ ಅಪ್ಪಣೆಯನ್ನು ಪಡೆಯಲೆಂದೇ ಈಗ ಬಂದುದು! ರಾಜ್ಯದಲ್ಲಿ ಪ್ರಕಟಿಸಬೇಕಾಗಿದ್ದ ಈ ಘೋಷಣೆಗೆ ಅಂಕಿತ ಹಾಕಬೇಕು" ಎಂದು ಸದಾಶಿವನು ಅದನ್ನು ಓದಿದನು.

ವೃದ್ಧನು ಸೇವಕನ ಆಸರದಿಂದ ಎದ್ದು ಕುಳಿತು "ನಾನು ನಿಮ್ಮಾಧೀನನು. ನನ್ನ ಅಪ್ಪಣೆಯು ತೋರಿಕೆಗೆ ಮಾತ್ರ!" ಎನ್ನುತ್ತ ಸದಾಶಿವನ ಕೈಯ ಕಾಗದಕ್ಕೆ ಅಂಕಿತ ಹಾಕಿದನು. ರಾಯಸದವನು ಮುಂದೆ ಬಂದು ತಾನು ಬರೆದು ತಂದ, ಅಧಿಕಾರಿಗಳ ನಿಯಾಮಕದ ಹಾಗು ಕಾರ್ಯಾಚರಣೆಯ ಆಜ್ಞೆಗಳಿಗೂ ಅಂಕಿತ ಪಡೆದನು.

"ಏಳಿರಿ, ಸದಾಶಿವನಾಯಕರೇ, ನಮ್ಮ ಕಾರ್ಯವನ್ನು ಆರಂಭಿಸೋಣ."

"ಪ್ರಭುಗಳೇ, ಈಗಲೆ ತಮ್ಮ ಆಡಳಿತವು ಸಾಗಿತೆಂದೇ ತಿಳಿಯಿರಿ."

"ಒಡೆಯರೇ ರಾಜವೈಭವವು ತಮ್ಮ ಪದರಿಗೆ ಬಿದ್ದಿತೆಂದೇ ತಿಳಿಯಿರಿ."

"ನಿಮ್ಮ ರಾಜನಿಷ್ಠೆ ನಿರಂತರ ಬೆಳಗಲಿ. ಆಗಲಿ ಹೋಗಿ ಬನ್ನಿರಿ,"

ಎಲ್ಲರೂ ಹೋದರು. ವೀರಒಡೆಯನು ಅಸಾಧ್ಯವನ್ನು ಸಾಧಿಸಿದ ಹೊಸ ಕನಸು ಕಾಣುತ್ತಿದ್ದನು. ಅವನ ಸಂದೇಹ-ಭೀತಿಗಳು ತೊಲಗಿರದಿದ್ದರೂ ಜೀವನದಲ್ಲಿ ಜಿಗುಪ್ಸೆಗೊಂಡವನಾದ್ದರಿಂದ "ಪರಲೋಕದ ಕರೆಯು ಯಾವ ರೂಪದಲ್ಲಾದರೂ ಇದ್ದೇ ಇದೆಯಲ್ಲ' ಎಂದು ನಿರ್ಭೀತನಾಗಿದ್ದನು.

ಹೊಸ ಅಧಿಕಾರಿಗಳಾದ ಸದಾಶಿವ-ಪುಟ್ಟಣ್ಣರು ಯೋಚಿಸಿದಂತೆ ಎಲ್ಲ ಕಾರ್ಯಗಳನ್ನು ರಾತ್ರಿಯಲ್ಲಿಯೇ ಆರಂಭಿಸಿದರು. ಎಷ್ಟೋ ದಿವಸಗಳಿಂದ ಗುಪ್ತವಾಗಿರಿಸಿದ ಕ್ರಾಂತಿಗೆ ಅವರಿಂದು ಪ್ರಕಟರೂಪವನ್ನು ಕೊಡತಕ್ಕವರಿದ್ದರು. ಅದು ಪ್ರಕಟವಾದ ಮೇಲೆ ಪೂರ್ಣವಾಗುವವರೆಗೆ ನಗರವಾಸಿಗಳಾರೂ ಹೊರಗೆ ಹೋಗದಂತೆ ರಾತ್ರಿಯಲ್ಲಿಯೇ ಕೋಟೆಯ ಬಾಗಿಲು ಹಾಕಿಸಿದರು. ಅಲ್ಲಲ್ಲಿ ಸೈನಿಕರ ಕಾವಲಿರಿಸಿದರು. ಮರುದಿನ ಸಾಯಂಕಾಲ ತಮ್ಮ ಆಜ್ಞೆಯಾಗುವವರೆಗೆ ಬಾಗಿಲುಗಳನ್ನು ತೆರೆಯಕೂಡದೆಂದು ನಿರ್ಬಂಧ ಮಾಡಿದರು. ಕೋಟೆಯೊಳಗಿನ ಯಾವ ಸುದ್ದಿಯೂ ಹೊರಗೆ ಹೋಗದಂತಾಯಿತು.

ಹೊತ್ತು ಹೊರಡುವ ಮೊದಲೆ ಸರ್ವವೂ ಸಿದ್ಧವಾಯಿತು. ನಗರವಾಸಿಗಳು ಹಾಸಿಗೆಯಿಂದೇಳುವ ಹೊತ್ತಿಗೆ ಊರಲ್ಲೆಲ್ಲ ಹೊಸರಾಜನ ಸಿಂಹಾಸನಾರೋಹಣ ಮಹೋತ್ಸವದ ಡಂಗುರದ ಹೊಯ್ಕು ನಡೆದಿದೆ; ವಾದ್ಯಧ್ವನಿ ಮೊಳಗಿದೆ; ಉತ್ಸವದ ಔತಣವು ಮನೆ ಮನೆಗೆ ಬಂದು ನಿಂತಿದೆ. ಎಲ್ಲಿ ನೋಡಿದರೂ ಆಶ್ಚರ್ಯ! ಗೊಣಗು!! ಪಿಸುಮಾತು!!!

ನಾಗರಿಕರು–ಮನಸ್ಸಿದ್ದವರೂ, ಇಲ್ಲದವರೂ– ಹೊಸ ಮಂತ್ರಿ ಸದಾಶಿವನ ಆಮಂತ್ರಣದಂತೆ ಆಶ್ಚರ್ಯ– ಭಯ– ಕುತೂಹಲಗಳೊಡನೆ ಬಂದು ಸಭಾಲಯದಲ್ಲಿ ನೆರೆಯಹತ್ತಿದರು. ಪುಟ್ಟಣ್ಣನ ಆಜ್ಞೆಯಂತೆ ಸಾಕಷ್ಟು ಭಟರು ಮೊದಲೇ ಬಂದು ರಾಜಾಂಗಣವನ್ನೆಲ್ಲ ವ್ಯಾಪಿಸಿದ್ದರು ವೀರಬಡೆಯರಲ್ಲಿ ರಾಜನಿಷ್ಠೆಯ ಸಾರ್ವತ್ರಿಕ ಪ್ರತಿಜ್ಞೆಯೂ ನೆರವೇರಿಸಲ್ಪಟ್ಟಿತು. ಸತ್ಪ್ರಭುವಾದ ವೀರಭದ್ರನಾಯಕರಲ್ಲಿ ನಿಷ್ಠೆಯುಳ್ಳ ನಾಗರಿಕರು ಒತ್ತಾಯಿಸಲ್ಪಟ್ಟರು. ಹಲವರು ಸೆರೆಯಾಳಾದರು ಕೆಲವರು ಪ್ರಾಣಸಂಕಟಕ್ಕೆ ಗುರಿಯಾದರು. ಕ್ರೂರತನವು ತುಂಬ ಗೋಚರವಾಯಿತು.

ಎರಡು ತಾಸು ಹೊತ್ತು ಏರಿರಬಹುದು! ವೀರಬಡೆಯನು ತನ್ನ ಮಂದಿರದಿಂದ ಮೆರೆವಣಿಗೆಯೊಡನೆ ಬಂದು ಸಭಾಲಯವನ್ನು ಪ್ರವೇಶಿಸಿದನು. ಏನೋ ಕೆಲವು ವಿಧಾನಗಳು ನಡೆದು ಪಟ್ಟಾಭಿಷೇಕೋತ್ಸವವು ನೆರವೇರಿತು. ಹೊಸ ಮಂತ್ರಿ–ಸೇನಾಪತಿಗಳಿಗೆ ಆ ಪದದ ಔಪಚಾರಿಕ ಗೌರವವು ಸಲ್ಲಿಸಲ್ಪಟ್ಟಿತು. ಹೊಸ ಆಡಳಿತದ ಘೋಷಣೆಯಾಯಿತು. ಹೊಸ ಅರಸನ ಹೆಸರಿನಿಂದ ರಾಜ್ಯದ ಎಲ್ಲ ದುರ್ಗಾಧಿಪತಿಗಳಿಗೆ ಆಜ್ಞೆಗಳು ಹೋದವು. ತಾನೂ ಅರಸಾದೆನೆಂದು ವೀರಬಡೆಯನಿಗೆ ಹಿಗ್ಗು! ಸಹಜವದೆ. ಬಯಸಿ ಬೇಡಿದ ರಾಜಪದವಿಯಲ್ಲವೇ?

—

## ೫. ಇದೇನು ಅನಾಹುತ !

ವೀರಭದ್ರ ನಾಯಕನು ತೀರ್ಥರಾಜಪುರದಲ್ಲಿ ಭಕ್ತಿ ಭಾವಪೂರಿತನಾಗಿ ದಾನ-ಧರ್ಮ-ಸಮಾರಾಧನೆಗಳನ್ನು ನಡೆಯಿಸಿ ಹಲವು ಉತ್ಸವಗಳನ್ನು ನಡೆಯಿಸಿದನು. ಬಳಿಕ ಸಕಲ ಸರಂಜಾಮುದೊಡನೆ ನಂದನಪುರಕ್ಕೆ ಹೊರಟು ತುಂಗಾ ತೀರದ ರಮ್ಯ ಪ್ರದೇಶದಲ್ಲಿ ಬೀಡು ಬಿಟ್ಟಿದ್ದನು. ಅಲ್ಲಿ ಫಲ ವೃಕ್ಷಗಳು ಎಡೆಬಿಡದೆ ಬೆಳೆದು ನಿಂತಿರುವವು. ತೆಂಗಿನ ಮರಗಳು ನದೀವಧುವಿಗೆ ಚಾಮರಗಳನ್ನು ಹಿಡಿದಿದ್ದವು. ಬಾಳೆ ಸೇರಿಲೆಗಳು ಎಲೆಗೈಗಳಿಂದ ಅವಳನ್ನು ಸೇವಿಸುತ್ತಿದ್ದವು. ಕಿಲಿಕಿಲಿಸುವ ಗಿಳಿಗಳು, ಕಲಿರವದ ಕೋಗಿಲೆಗಳು, ಗುಂಜಾರವದ ಗುಂಗೀಹುಳಗಳು, ಜಲದೇವತೆಯು ಗಾನವನ್ನು ಮಾಡುತ್ತಿದ್ದವು. ಲತಾಂಗಿಯರು ಪುಷ್ಪಗಳನ್ನು ಅರ್ಪಿಸುತ್ತಿದ್ದರು. ಈ ಸಂಭ್ರಮವನ್ನು ನೋಡಬಯಸಿ ಬಂದು ಸುಳಿಯುವ ಸುಳಿಗಾಳಿಯ ತಂಪು, ಪುಷ್ಪಗಳ ಕಂಪು, ಪಕ್ಷಿನಿಕರದ ಸರಗಳ ಇಂಪು ತುಂಬಿ ಮನೋಹರವಾದ ಆ ಬನಸಿರಿಯ ಸೊಬಗಿನಲ್ಲಿ ಒಂದು ದಿನ ಉಳಿಯ ಬಯಸಿ ದಂಡಿನವರು ಅರಸನಪ್ಪಣೆ ಪಡೆದಿದ್ದರು. ಅತ್ಯವಸರದ ಪ್ರಯಾಣಕ್ಕೂ ಕಾರಣವಿರಲಿಲ್ಲ. ಪುಟ್ಟಣ್ಣನಿಂದ ವಿರಚಿತವಾದ ಸದಾಶಿವನ ಮೋಸದ ಜಾಲವು ಬೀಸಿ ಬರುತ್ತಿರುವದನ್ನು ಅವರಾರೂ ಇನ್ನೂ ಅರಿಯರು.

ವೀರಭದ್ರ ನಾಯಕನು ಮಧ್ಯಾಹ್ನದ ಭೋಜನವನ್ನು ಅದೇ ಆಗ ತೀರಿಸಿಕೊಂಡು ಶಿಬಿರದ ಮೊಗಶಾಲೆಯಲ್ಲಿ ಕುಳಿತಿದ್ದನು. ಸೇವಕರು ಚವರಿಗಳಿಂದ ಗಾಳಿಯನ್ನು ಹಾಕುತ್ತಿದ್ದರು. ಹತ್ತಿರದಲ್ಲಿ ಒಬ್ಬಿಬ್ಬರು ದಳನಾಯಕರ ಹೊರತಾಗಿ ಬೇರೆ ಯಾರೂ ಇರಲಿಲ್ಲ. ಹೀಗಿರುವಾಗ ಛಟ-

ನೊಬ್ಬನು ಬಂದು ನೆಲಮುಟ್ಟಿ ನಮಿಸಿ "ಜೀಯಾ, ನಾವು ನದಿಗೆ ಹೋದಾಗ ಇಬ್ಬರು ಶಿಷ್ಯರೊಡನಿರುವ ಒಬ್ಬ ಜಂಗಮ ಮೂರ್ತಿಯನ್ನು ಕಂಡೆವು. ಅವರು ನಿಜಲಿಂಗ ಶಿವಯೋಗಿಗಳ ಶಿಷ್ಯರಂತೆ! ಶಿವಯೋಗಿಗಳು ಇವರೊಡನೆ ತಮಗೊಂದು ಸಂದೇಶ ಕಳಿಸಿರುವರಂತೆ! ಈಗ ಅವರು ಇಲ್ಲಿಗೆ ಬರುವರು." ಎಂದು ಹೇಳಿದನು. ಅದನ್ನು ಕೇಳಿ ಅರಸನು ಅವರ ಆಗಮನವನ್ನು ಆತುರದಿಂದ ನಿರೀಕ್ಷಿಸತೊಡಗಿದ್ದನು.

ನಿಜಲಿಂಗ ಶಿವಯೋಗಿಗಳು ಸಹ್ಯಾದ್ರಿಯೊಳಗಿನ ಶೈಲಪುರದಲ್ಲಿರುವ ಶಿವಶಕ್ತಿಮಠದ ಅಧಿಪತಿಗಳು. ಕೆಳದಿಯ ಅರಸು ಮನೆತನಕ್ಕೆ ಕುಲಗುರುಗಳಾಗಿದ್ದರು. ವೀರಭದ್ರ ನಾಯಕನಿಗೆ ಹೆಚ್ಚು ನಿಷ್ಠೆ ಇವರಲ್ಲಿ! ಗುರುಗಳ ಆಜ್ಞೆಯೆಂದರೆ ಪ್ರಾಣಕ್ಕಿಂತ ಹೆಚ್ಚಾಗಿ ತಿಳಿದು ಪಾಲಿಸುತ್ತಿದ್ದನು. ಸ್ವಲ್ಪ ವೇಳೆಯಲ್ಲಿ ತರುಣ ಜಂಗಮನು ಶಿಬಿರದ ಬಾಗಿಲಿಗೆ ಬರಲು ಅರಸನು ಎದ್ದು ಎದುರು ಹೋಗಿ ವಂದಿಸಿ ಕರೆತಂದು ಆಸನದ ಮೇಲೆ ಕುಳ್ಳಿರಿಸಿದನು. ಆ ಮೂರ್ತಿಯು ಅರಸನನ್ನು ಆಶೀರ್ವದಿಸಿದ ಬಳಿಕ ಹೀಗೆಂದನು :

"ಗುರುಗಳ ಪರಮಾನುಗ್ರಹ ಪಡೆದ ಪ್ರಭುಗಳು ಧನ್ಯರು ! ಗುರುಗಳ ಪ್ರಸಾದ–ಫಲ–ಪುಷ್ಪಗಳನ್ನು ಸ್ವೀಕರಿಸಬೇಕು. ಇದರೊಡನೆ ಸಂದೇಶ ಪತ್ರಿಕೆಯೊಂದನ್ನು ದಯಪಾಲಿಸಿದ್ದಾರೆ. ಅದೂ ಇದರಲ್ಲಿದೆ." ಎನ್ನುತ್ತ ಎದ್ದು ತನ್ನ ಅನುಚರನು ತುಂಬಿಕೊಟ್ಟ ತಳಿಗೆಯನ್ನು ತಕ್ಕೊಂಡು ಅರಸನತ್ತ ಮುಂದುವರಿಯಲು ಅರಸನು ಎದ್ದು ನಿಂತು ತನ್ನ ಉತ್ತರೀಯದ ಪದರಿನಲ್ಲಿ ಅವುಗಳನ್ನು ತಕ್ಕೊಂಡು ಶಿರದಲ್ಲಿ ತಾಳಿ ಕಣ್ಣಿಗೊತ್ತಿಕೊಂಡು ಕುಳಿತು ಪತ್ರಿಕೆಯನ್ನು ಓದಿಕೊಂಡನು.

"ಇದೇನು ಗುರುಗಳು ತಾವು ದೇಹಬಿಡುವ ಸಮಯವೆಂದಿದ್ದಾರೆ. ದರ್ಶನಕ್ಕೆ ಬರಬೇಕೆಂದು ಅಪ್ಪಣೆ ಮಾಡಿದ್ದಾರೆ. ನಮ್ಮನ್ನು ಅಗಲಿ ಹೋಗುವರೇ ?"

"ಹೌದು ಈ ಸುದ್ದಿ ಸುತ್ತಲೂ ಹೋಗಿದೆ ನಾಯಕರೇ ! "

"ನಾನು ಅರಿಯೆನು."

"ಈಗ ಪ್ರತ್ಯಕ್ಷನಾಗಿಯೇ ನನ್ನನ್ನು ಕಳಿಸಿದ್ದಾರಲ್ಲ ! ನಿಮಗೆ ಏನಾದರೂ ಹೇಳುವವರಿದ್ದಲೇಬೇಕು. ಅಂತೆಯೇ ಈಗ ನಿಮ್ಮನ್ನು ತಮ್ಮ ಸನ್ನಿಧಿಗೇ ಕರೆದಿರುವರು."

"ಅವಶ್ಯ ಬರುವೆನು ಅವರ ಚರಣಗಳ ಅಂತ್ಯದರ್ಶನ! ಅವರು ಅಗಲುವದೊಂದು ನಮ್ಮ ದುರ್ದೈವದ ಸಂಗತಿ ! ನಾವು ಯಾವಾಗ ಹೊರಡ ಬೇಕು ?"

"ಈಗಲೇ ಪ್ರಭುಗಳೇ, ನಾಳೆ ಇಪ್ಪತ್ತು ಗಳಿಗೆಗೆ ಗುರುಗಳು ಲಿಂಗೈಕ್ಯ ರಾಗುವರು. ಶೈಲಿಪುರವಂತೂ ಇಲ್ಲಿಂದ ಹದಿನೈದು ಹರದಾರಿ; ಅಂದ ಮೇಲೆ ಯಾವಾಗ ಹೊರಡಬೇಕಾದೀತು ನೋಡಿರಿ. ನಾಳೆ ಹತ್ತು ಗಳಿಗೆಯ ಹೊತ್ತಿಗೆ ನಾವು ಮುಟ್ಟಬೇಡವೇ ?

"ಪೂಜ್ಯರೇ ನಾನು ಸಿದ್ಧನೇ ಇದ್ದೇನೆ."

"ಏಳಿರಿ ಹಾಗಾದರೆ; ಇಂದು ಶೈತೂರಲ್ಲಿ ರಾತ್ರಿಯನ್ನು ಕಳೆಯೋಣ. ಅಲ್ಲಿ ಸಾಯಂಕಾಲದ ನಮ್ಮ ಶಿವಾರ್ಚನೆಯ ವ್ಯವಸ್ಥೆಗಾಗಿ ಶಿಷ್ಯನೊಬ್ಬ ನನ್ನು ಬಿಟ್ಟು ಬಂದಿದ್ದೇನೆ. ನಾಳೆ ಬೆಳಗಿನಲ್ಲಿಯೇ ಅಲ್ಲಿಂದ ಮುಂದೆ ಸಾಗ ಬಹುದು."

"ಸರಿ, ಶೈತೂರಲ್ಲಿ ನಮ್ಮ ದುರ್ಗ ರಕ್ಷಕ ಜಗನಾಯಕನಿರುವನು. ಅವನಿಂದ ನಮ್ಮ ಬೀಡಾರದ ವ್ಯವಸ್ಥೆಯಾಗುವದು, ಸಂಗಡ ಒಂದು ದಳವನ್ನು........"

"ಛೇ ಬೇಡ ಒಡೆಯರೇ, ಸೈನ್ಯದೊಂದಿಗೆ ತೀವ್ರ ಪ್ರಯಾಣ ಸಾಧ್ಯ ವಾಗದು. ಬೇಕಾದರೆ ಹತ್ತೆಂಟು ಜನರನ್ನು ಮಾತ್ರ ಸಂಗಡ ಕರಕೊಳ್ಳ ಬೇಕು. ಹೆಚ್ಚು ಜನರಿಂದ ಪ್ರಯೋಜನವೇನು ?''

"ಹಾಗೇ ಆಗಲಿ."

ಅರಸನು ಹೊರಡುವ ವ್ಯವಸ್ಥೆಗೆ ನಡೆದನು. ತನ್ನ ನಾಟಕ ಪರಿ ಣಾಮ ಮಾಡಿದುದಕ್ಕೆ ಜಂಗಮ ಮೂರ್ತಿಗೆ ಆನಂದವಾಗಿತ್ತು. ಮುಂದೆ ಸ್ವಲ್ಪ ಹೊತ್ತಿನಲ್ಲಿ ಅರಸನ ದೊಡ್ಡ ಕುದುರೆಯೂ ಹತ್ತುಜನ ರಾಹುತರೂ ಸಿದ್ಧರಾದರು. ಜಂಗಮನಿಗೂ ಅವನ ಸೇವಕರಿಗೂ ಬೇರೊಂದು ಗಾಡಿ ಯನ್ನು ಹೂಡಿದರು. ಬಳಿಕ ಅರಸನು ಪಾಳಯದಲ್ಲಿ ತಕ್ಕ ವ್ಯವಸ್ಥೆ ಮಾಡಿ, ಇಳಿಹೊತ್ತಿನ ಸುಮಾರಿಗೆ ಅವರೆಲ್ಲರೊಡನೆ ಶೈಲಪುರಕ್ಕೆ ಹೊರಟನು. ತಮ್ಮನ್ನು ನಿರಂತರವಾಗಿ ಅಗಲುವ ಗುರುಗಳ ಕೊನೆಯ ದರ್ಶನಕ್ಕಾಗಿ ವೀರಭದ್ರನು ಅತ್ಯಾತುರನಾಗಿದ್ದನು. ಅವರೆಲ್ಲರು ಭರದಿಂದ ಮಾರ್ಗ

ಕ್ರಮಣ ಮಾಡುತ್ತಿದ್ದರು. ಗುರುದರ್ಶನದ ಪವಿತ್ರಭಾವನೆಯು ಅವನನ್ನು ಮೋಸಗೊಳಿಸುವದೋ ರಕ್ಷಿಸುವದೋ ?

ಹಾದಿಯಲ್ಲಿ ಎಲ್ಲಿಯೂ ವಿಶ್ರಾಂತಿಗೊಳ್ಳದೆ ಸಾಗಿ ಅವರು ಸೂರ್ಯಾಸ್ತದ ಸಮಯಕ್ಕೆ ಸಹ್ಯಗಿರಿಯನ್ನು ಸೇರಿದರು. ಮುಂದೆ ಸ್ವಲ್ಪ ಹೊತ್ತಿನಲ್ಲಿಯೇ ಬೆಟ್ಟದಡಿಯ ಕಣಿವೆಗಳಲ್ಲಿ ಕಾಣಿಸಿಕೊಂಡ ಕತ್ತಲೆ ಮೇಲೇರಿ ಬರತೊಡಗಿತು.

ಆ ಗುಡ್ಡಗಾಡು ಪ್ರದೇಶದಲ್ಲಿ ಭರದಿಂದ ಸಾಗುವದು ಆಗಲಿಲ್ಲ. ಇನ್ನೂ ಮುಂದೆ ಶೈತೂರು ಎರಡು ಹರದಾರಿ ಇತ್ತು. ಅದನ್ನು ಮುಟ್ಟದೆ ನಡುವೆ ಎಲ್ಲಿಯೂ ಉಳಿಯಲಿಕ್ಕೆ ಬರುವಂತಿಲ್ಲ. ಆಗ ನಸುಗತ್ತಲೆ-ನಸುಬೆಳಕಿನ ಸಮಯ ! ಅಷ್ಟರಲ್ಲಿ ಒಂದು ಹೃದಯಭೇದಕ ನೋಟವು ಅವರ ಕಣ್ಣಿಗೆ ಬಿತ್ತು ! ಹೃದಯದ್ರಾವಕ ರೋದನವು ಅವರಿಗೆ ಕೇಳಿಸಿತು. ಅಡ್ಡದಾರಿಯಿಂದ ನಡೆದು ಹತ್ತು ಹನ್ನೆರಡು ಜನ ಬೇಡರ ಒಂದು ತಂಡವು ಅರಣ್ಯವನ್ನೂ ಪ್ರವೇಶಿಸುತ್ತಿತ್ತು. ಒಬ್ಬ ನವಯುವತಿಯೂ ಒಂದು ಕುಸೂ ಅವರ ಸೆರೆಯಲ್ಲಿ ಸಿಕ್ಕು ಗೋಳಿಡುತ್ತಿದ್ದರು. ಆ ಗೋಳನ್ನು ಕೇಳಲಾರದೆ ಭೂದೇವಿಯೂ ಗುಡ್ಡಗಳ ಪ್ರತಿಧ್ವನಿಯಿಂದ ಅಳುತ್ತಿದ್ದಳು. ಈ ಕರುಣಾಜನಕ ಸ್ವರದಿಂದ ಹೃದಯಗರಗಿ- ಬಂಡುಗಾರರ ಈ ದುಷ್ಟತನಕ್ಕೆ ಅತಿ ಸಂತಪ್ತನಾಗಿ- ವೀರಭದ್ರನಾಯಕನು ತನ್ನ ಹತ್ತು ಜನ ರಾಹುತರೊಡನೆ ಅವರನ್ನು ಬೆನ್ನಟ್ಟಿದನು. ಬೇಡರು ಪಾರಾಗಿ ಹೋಗಬೇಕೆಂದು ಬೇಕಾದಷ್ಟು ಪ್ರಯತ್ನಿಸಿದರೂ ಕಡೆಗೆ ಇವರ ಕೈಯಲ್ಲಿ ಸಿಕ್ಕರು. ಇತ್ತಂಡದ ನಡುವೆ ಆದ ಬಡಿದಾಟದಲ್ಲಿ ಎಂಟು ಜನ ಬೇಡರು ನೆಲಕ್ಕುರುಳಿದರು. ಉಳಿದವರು ಆ ಯುವತಿಯನ್ನು ಕೂಸನ್ನು ಬಿಟ್ಟು ಕಾಲ್ದೆಗೆದರು. ಕತ್ತಲೆಯೂ ಬಂಡೆ-ಗುಡ್ಡಗಳೂ ಅವರನ್ನು ಮರೆಮಾಡಿದವು. ಆದ್ದರಿಂದ ಅವರನ್ನು ಹುಡುಕುವ ಗೊಡವೆಗೆ ಬೀಳದೆ ರಾಜನು ನೆಲದಮೇಲೆ ಮಲಗಿದ ಆ ತರುಣಿಯ ಕಡೆಗೆ ಬಂದನು. ಒಬ್ಬನು ಹುಡಿಯಲ್ಲಿ ಹೊರಳಿ ಅಳುತ್ತಿರುವ ಕೂಸನ್ನು ಎತ್ತಿಕೊಂಡನು. ಆ ತರಣಿಯು ಹೊಡೆದಾಟದ ಪರಿಸ್ಥಿತಿಯನ್ನು ನೋಡಿ ಮೂರ್ಛಿತಳಾಗಿ, ತಂಗಾಳಿಗೆ ಆಗ ಚೇತರಿಸತೊಡಗಿದ್ದಳು. ಮೊದಲು ಊರು ಮುಟ್ಟಿ ಉಪಚಾರ ಮಾಡುವದು ಒಳಿತೆಂದು ಭಾವಿಸಿ, ಅವಳನ್ನು ಕುದುರೆಯ ಮೇಲೆ ಕೂಡ್ರಿಸಿಕೊಂಡು ಹಾದಿಯನ್ನು ಹುಡುಕುತ್ತ ಬಂದು

ತಮ್ಮ ಹಾದಿಗೆ ಹತ್ತಿದರು. ಅಲ್ಲಿ ಆ ಜಂಗಮನು ಸೇವಕರೊಡನೆ ಕುಳಿತಿದ್ದನು. ವೀರಭದ್ರನ ಶೌರ್ಯ-ಸಾಹಸಗಳನ್ನು ಕಂಡು ಬೆರಗುಬಿಟ್ಟಿದ್ದನು. ಅವರೆಲ್ಲರು ಕಷ್ಟದಿಂದ ಮಾರ್ಗಕ್ರಮಣ ಮಾಡುತ್ತ ಮೂರು ತಾಸು ರಾತ್ರಿಯ ಮೇಲೆ ಕೈತೂರನ್ನು ಮುಟ್ಟಿದರು. ಜಗನಾಯಕನು ತೆರವು ಮಾಡಿಸಿದ ಒಂದು ವಿಶಾಲವಾದ ಮನೆಯಲ್ಲಿ ರಾಜನು ಉಳಕೊಂಡನು. ಜಂಗಮನು ತನ್ನ ಶಿಷ್ಯನು ತನಗಾಗಿ ವ್ಯವಸ್ಥೆ ಮಾಡಿದ ಮನೆಗೆ ಹೋಗುವೆನೆಂದು ಹೋದನು.

ಆ ಹೆಣ್ಣುಮಗಳು ಇನ್ನೂ ಪೂರ್ಣ ಪ್ರಜ್ಞೆಗೆ ಬಂದಿರಲಿಲ್ಲ. ಅರಸನು ಆವಳನ್ನೂ ಕೂಸನ್ನೂ ಬೇರೆ ಕೋಣೆಯಲ್ಲಿ ಇರಿಸಿ ಉಪಚಾರಕ್ಕೆ ಒಬ್ಬ ದಾಸಿಯನ್ನು ಇಡಿಸಿದನು. ಅರಸನ ಸತ್ಕಾರವು ಚೆನ್ನಾಗಿ ನಡೆಯಿತು. ಆದರೆ ಜಗನಾಯಕನು ಅರಸನ ಜತೆಗೆ ಊಟಕ್ಕೆ ಬರಲಿಲ್ಲ. ಆತನ ಚಿತ್ತ ಚಂಚಲವಾದಂತೆ ಕಂಡರೂ ಅರಸನು ಹೀಗೆಕೆಂದು ವಿಚಾರಿಸುವ ಗೊಡವೆಗೆ ಹೋಗಲಿಲ್ಲ. ತನಗಾಗಿ ಮಲಗುವದಕ್ಕೆಂದು ಸಿದ್ಧಪಡಿಸಿದ ಕೋಣೆಯಲ್ಲಿ ಜಗನಾಯಕನೊಡನೆ ಕೆಲವು ವೇಳೆ ಮಾತಾಡುತ್ತ ಕುಳಿತಿದ್ದನು. ಜಗನಾಯಕನ ಮಾತೂ ಮುಖಲಕ್ಷಣವೂ ಆತನ ಮಾನಸಿಕ ಅಸ್ವಸ್ಥತೆಯನ್ನು ಸೂಚಿಸುತ್ತಿದ್ದವು. ಅರಸನು ತಾನು ದಣಿದುದರಿಂದ ಮಲಗುವ ಭಾವವನ್ನು ತೋರಿಸಲು ಜಗನಾಯಕನು ಎದ್ದು ಹೊರಗೆ ಹೋದನು. ಅರಸನು ಮಲಗಿಕೊಂಡನು. ಬಾಗಿಲಲ್ಲೊಬ್ಬ ಭಟನು ಕಾವಲಿಗಿದ್ದನು.

ಅರಸನಿಗೆ ನಿದ್ರೆ ಬೇಗ ಬರಲಿಲ್ಲ. ಹಾದಿಯಲ್ಲಿ ಒದಗಿದ ಪ್ರಸಂಗ, ಆ ಬಾಲೆಯ ಮುಂದಿನ ವ್ಯವಸ್ಥೆ, ಗುರುಗಳ ವಿಯೋಗ, ಜಗನಾಯಕನ ವಿಚಿತ್ರ ವರ್ತನೆ ಮುಂತಾದ ಸಂಗತಿಗಳು ಅವನ ತಲೆಯಲ್ಲಿ ಸುಳಿದಿದ್ದವು. ಮೊದಲು ವಿಪತ್ತಿಗೀಡಾದ ಆ ಸ್ತ್ರೀಯ ವಿಷಯ! ಅವಳೀಗ ಪೂರ್ಣ ಪ್ರಜ್ಞೆಗೆ ಬಂದಿರುವಳೇ? ಕೇಳಬೇಕೆಂದರೆ ಅಲ್ಲಿ ದಾಸಿಯರಾರೂ ಕಾಣಲಿಲ್ಲ; ಕಳವಳವು ಸುಮ್ಮನಿರಗೊಡಲಿಲ್ಲ. ಆತುರದಿಂದ ತಾನೇ ಎದ್ದು ನಡುಮನೆಗೆ ಬಂದನು. ಹತ್ತರಿದ್ದ ಭಟನು ದೀಪದೊಡನೆ ಮುಂದಾಗಿದ್ದನು. ಆ ಕೋಣೆಯ ಬಾಗಿಲು ಮುಚ್ಚಿದ್ದಿತು. ಒಳಗೆ ಮೆಲ್ಲಗೆ ಮಾತಾಡುವ ದನಿ ಕೇಳಿಸಿತು.

ಶಬ್ದಗಳು ಆಪತ್ತಿಗೆ ಸಂಬಂಧಿಸಿದ್ದವು. ಸಂಗತಿಯು ಪೂರ್ಣ ಅವಗಾಹನೆಗಾಗಿ ಬಾಗಿಲಲ್ಲಿ ಕೊಂಚ ಹೊತ್ತು ಕೇಳುತ್ತ ನಿಂತನು.

"......ಕೂಸು ಮಲಗಿದೆಯಮ್ಮ ಚಿಂತಿಸಬೇಡ. ನಿನಗೆ ಸ್ವಲ್ಪ ಹಾಲು ತರಲೇ?"

"ಬೇಡ......ನಾನೀಗ ಸುರಕ್ಷಿತಳಾಗಿರುವೆನೇ?"

"ಸುರಕ್ಷಿತವಾಗಿರುವೆಯಮ್ಮಾ, ಇನ್ನು ಯಾವ ಭಯವೂ ಇಲ್ಲ ತಾಯೀ ನಿನಗೆ."

"ನಾನು ಯಾರ ಸಂರಕ್ಷಣೆಯಲ್ಲಿರುವೆನು.?"

"ಇಕ್ಕೇರಿಯ ಪ್ರಭು. ವೀರಭದ್ರ ಒಡೆಯರ ಸಂರಕ್ಷಣೆಯಲ್ಲಿ!"

"ಬಂಡುಗಾರರಿಂದ ನನ್ನನ್ನು ಬಿಡಿಸಿಕೊಂಡು ಬಂದವರು ಅವರೇ ಏನು?"

"ಹೌದು ತಾಯೀ."

"........................"

"ಅಳಬೇಡಮ್ಮಾ, ನಿನಗಿನ್ನು ಯಾವ ವಿಪತ್ತೂ ಇಲ್ಲ; ದುಃಖಿಸುವದೇಕೆ?"

"ನನಗಾವ ವಿಪತ್ತೂ ಇನ್ನಿಲ್ಲವ್ವಾ........ಇಕ್ಕೇರಿ ದೊರೆಗಳು ಸ್ವಲ್ಪ ಮೊದಲೇ ಬಂದಿದ್ದರೆ, ನಮ್ಮಕ್ಕ ಬದುಕುತ್ತಿದ್ದಳು. (ಅಳುವು) ಅಕ್ಕಾ, ನಿನ್ನ ಮಗಳನ್ನು ನನ್ನ ಕೈಯಲ್ಲಿ ಕೊಟ್ಟು ನೀನೊಬ್ಬಳೇ ತೆರಳಿದೆಯಾ?(ಅಳುವು)"

"ಸಮಾಧಾನಗೊಳ್ಳಮ್ಮ, ನಿಮ್ಮಕ್ಕನು ಬಂಡುಗಾರರಿಂದ ಕೊಲ್ಲಲ್ಪಟ್ಟಳೇ? ನೀವು ಹೇಗೆ ಬಂಡುಗಾರರ ವಶವಾದಿರಿ? ಹೇಳುವಂತಿದ್ದರೆ ಸಮಾಧಾನದಿಂದ ಹೇಳು ತಾಯೀ! ಎದೆ ಹಗುರಾಗುವದು."

"........ನಮ್ಮ ದುರವಸ್ಥೆಯನ್ನೇನು ಹೇಳಲವ್ವಾ, ನಮ್ಮಕ್ಕನು ನಮ್ಮ ತಂದೆಯ ಮನೆಯಲ್ಲಿ ಈ ಚೊಚ್ಚಲ ಕೂಸನ್ನು ಹೆತ್ತು ವೈಭವದಿಂದ ಪತಿಯ ಮಂದಿರಕ್ಕೆ ನಡೆದಿದ್ದಳು. ಪ್ರೀತಿಯಿಂದ ನನ್ನನ್ನು ಸಂಗಡ ಕರೆದುಕೊಂಡಿದ್ದಳು. ದಾರಿಯಲ್ಲಿಯ ಒಂದು ಕೊಳ್ಳದಲ್ಲಿ ಬಂಡುಗಾರರು ನಮ್ಮನ್ನು ಮುತ್ತಿದರು. ಹೊಡೆದಾಟದಲ್ಲಿ ನಮ್ಮ ಕಡೆಯವರೆಲ್ಲರೂ ಮಡಿದರು. ನಾವು ಆ ಪುಂಡರ ಪಾಲಾದೆವು........"

"ಶಿವಶಿವಾ, ನಿರಾಶ್ರಿತರಾದ ಅಬಲೆಯರ ಗತಿಯೇನು?"

"ಗತಿಯೇನು, ಅವರು ನಮ್ಮನ್ನು ಒಂದು ಗವಿಯಲ್ಲಿ ಒಯ್ದಿಟ್ಟು ದುರಾಶೆಯಿಂದ ಅಕ್ಕನನ್ನು ಪೀಡಿಸತೊಡಗಿದರು. ಪವಿತ್ರಾತ್ಮಳೂ ಪತಿವ್ರತೆಯೂ ಆದ ನಮ್ಮಕ್ಕನು ಸಂಜೆಯ ಮುಂದೆ ಆತ್ಮಹತ್ಯೆ........(ಅಳುವು)"

"ಅಯ್ಯೋ ವಿಧಿ ಮಾನವಂತೆಗೆ ಈ ಅವಸ್ಥೆ ತರಬೇಕೆ? ಸಹಿಸು ತಾಯೀ ದುಃಖವನ್ನು ಸಹಿಸು! ಜೀವನ ಮಾರ್ಗದಲ್ಲಿ ಇಂತಹ ಘೋರ ವಿಪತ್ತುಗಳೂ ಕಾದು ಕುಳಿತಿರುವವು. ನಾವು ಧೈರ್ಯದಿಂದ ಇರಬೇಕು. ಪರಮಾತ್ಮನ ಕೃಪೆಯಿದ್ದಂತೆ ಅವುಗಳಲ್ಲಿ ತೇಲಬಹುದು ಮುಳುಗಬಹುದು. ನೀನು ಹಲುಬಿ ಹಲುಬಿ ಬಳಲಬೇಡ!"

"....(ಸಣ್ಣಾದ ದನಿಯಲ್ಲಿ) ಆ ದುರ್ಜನರಲ್ಲಿಯೇ ನನ್ನ ಸಲುವಾಗಿ ಕಲಹ ನಡೆಯಿತು; ಹೊಡೆದಾಟವೂ ಆಯಿತು. ಅವರೊಳಗಿನ ಹತ್ತು ಹನ್ನೆರಡು ಜನರು ಅದರೊಳಗಿಂದ ಜಾರಿ ನನ್ನನ್ನೂ ಈ ಕೂಸನ್ನೂ ತೆಗೆದುಕೊಂಡು ಗವಿಯಿಂದ ಹೊರಬಿದ್ದರು. ಕೊಳ್ಳದಿಂದ ಮೇಲೇರಿ ಬಂದು ದಾರಿಯನ್ನು ದಾಟಿ ಅಡವಿಯನ್ನು ಸೇರುತ್ತಿದ್ದರು. ಎಲ್ಲಿಗೆ ಹೋಗುತ್ತಿದ್ದರೋ ತಿಳಿಯದು. ಅಷ್ಟರಲ್ಲಿ ಹತ್ತೆಂಟು ಜನ ರಾಹುತರು ಬಂದು ತಡೆದರು. ಮುಂದೆ ಏನಾಯಿತೋ ನನಗೆ ಗೊತ್ತಿಲ್ಲ........"

"ಆ ರಾಹುತರಲ್ಲಿಯೇ ಪ್ರಭುಗಳು ಇದ್ದರು. ಪುಂಡರನ್ನು ಸವರಿ ನಿಮ್ಮನ್ನು ಇಲ್ಲಿಗೆ ಕರೆದುಕೊಂಡು ಬಂದಿದ್ದಾರೆ."

"ಇಕ್ಕೇರಿಯ ಪ್ರಭುಗಳು ಈಗ ಎಲ್ಲಿ ಇದ್ದಾರೆ ?"

"ಇಲ್ಲಿಯೇ ಇದ್ದಾರೆ. ಬೆಳಗಿನಲ್ಲಿ ಶೈಲಪುರಕ್ಕೆ ಹೊರಡುವರು."

"ನನ್ನನ್ನು ಎಲ್ಲಿಗೆ ಕಳಿಸುವರು ?"

"ಅದು ಇನ್ನೂ ತಿಳಿಯದು. ನಾಳೆ ಆಜ್ಞೆಯಾಗಬಹುದು."

ಆಗ ಬಾಗಿಲು ಓರೆಮಾಡಿ ವೀರಭದ್ರನಾಯಕನು ಒಳಗೆ ಕಾಲಿಟ್ಟನು. ಆ ಸದ್ದು ಕೇಳಿ ಬಾಗಿಲ ಕಡೆಗೆ ಬೆನ್ನು ಮಾಡಿ ಮಂಚದ ತುದಿಗೆ ಕುಳಿತಿದ್ದ ದಾಸಿಯು ಹೊರಳಿ ನೋಡಿದಳು.

"ಅಮ್ಮಯ್ಯ, ಪ್ರಭುಗಳೇ ಬಂದರು." ಎದ್ದು ಸರಿದು ನಿಂತಳು.

ಅವಳು ಸರಿದದ್ದರಿಂದ ರಾಜನ ಹಾಗೂ ಆ ತರುಣಿಯ ಮುಖಗಳು ಪರಸ್ಪರ ಕಾಣುವಂತಾದವು. ರಾಜನೆಂದನು :

"ನಿನ್ನನ್ನು ನಿನ್ನ ತಂದೆಯವರ ಕಡೆಗೇ ಕಳಿಸಿಕೊಡುವೆನು. ನಮಗೆ ನಿನ್ನ ತಂದೆಯವರ ಪರಿಚಯ ಆಗಬೇಕಷ್ಟೇ !"

ಆಕೆಗೆ ಏನೋ ನೆನಪಾಗಿ ಲಜ್ಜೆಯಾವರಿಸಿರಬೇಕು; ಭವಿಷತ್ತಿನ ಬೆಳಕಿನ ಕಿರಣವೊಂದು ಸುಳಿದಿರಬೇಕು; ಮುಖವು ಸ್ವಲ್ಪ ಅರಳಿತು. ಆ ವಿಷನ್ನಾವಸ್ಥೆ ಯಲ್ಲಿಯೂ ತುಂಬಿ ಸೂಸುವ ಆ ಸೌಂದರ್ಯರಾಶಿಯನ್ನು ಅದೇ ಕ್ಷಣದಲ್ಲಿ ಅರಸನು ನೋಡಿದನು. ಆಕೆ ಎದ್ದು ಕುಳಿತಳು. ಸೆರಗು ಸರಿಮಾಡಿಕೊಂಡು ತುಸು ನೋಡಿ ತಲೆತಗ್ಗಿಸಿ ಉತ್ತರಿಸಿದಳು

"ನನ್ನ ತಂದೆಯನ್ನು ತಾವು ಬಲ್ಲಿರಿ. ನನ್ನನ್ನೂ ಕೇಳಿ ಬಲ್ಲಿರಿ; ಆದರೆ ಕಂಡಿಲ್ಲ. ನಾನು.... ಅಯ್ಯೋ ಇಲ್ಲಿಯೂ ಬಂಡುಗಾರರು...."

ಎನ್ನುತ್ತಲೇ ಅವಳು ಮೂರ್ಛಿತಳಾಗಿ ಹಾಸಿಗೆಯಲ್ಲಿ ಬಿದ್ದಳು. ವೀರ ಭದ್ರನಾಯಕನು ಬೆಚ್ಚಿ ಹಿಂದೆ ಹೊರಳಿ ನೋಡಿದನು. ಹತ್ತಿಪ್ಪತ್ತು ಜನ ಕರಿಯ ಕಾಡು ಬೇಡರ ಭಟರು ಸಶಸ್ತ್ರರಾಗಿ ಒಳಗೆ ದುಮ್ಮಿಕ್ಕಿ ಬರುತ್ತಿದ್ದರು. ವೀರಭದ್ರನು ಟೊಂಕಕ್ಕೆ ಕೈ ಹಾಕಿದನು. ಖಡ್ಗವಿಲ್ಲ. ಮಲಗಿದವನು ಹಾಗೆಯೇ ಎದ್ದು ಬಂದಿದ್ದನು ಅವನು ಒಳಗಿನ ಬಾಗಿಲದಿಂದ ತಾನು ಮೊದಲು ಮಲಗಿದ ಕೋಣೆಗೆ ಓಡಿದನು. ಆದರೆ ಸಂಚುಗಾರರು ಆ ಕೋಣೆಯನ್ನೂ ಮುತ್ತಿದ್ದರು. ಗೂಟಕ್ಕೆ ಸಿಕ್ಕಿಸಿದ ಖಡ್ಗವಿರಲಿಲ್ಲ. ಅಷ್ಟ ರಲ್ಲಿ ಒರೆಗಳೆದ ಖಡ್ಗಗಳ ಮೊನೆಗಳನ್ನು ಮುಂದೆ ಮಾಡಿ ಹತ್ತು ಜನ ಭಟರು ಅರಸನನ್ನು ಸುತ್ತುಗಟ್ಟಿದರು. ಅವರಿಗೆ ಜಗನಾಯಕನು ಮುಖ್ಯನಾಗಿದ್ದನು. ಅದನ್ನು ಕಂಡು ಅರಸನು ತುಸು ಹೆದರಿದರೂ, ಧೈರ್ಯದಿಂದ 'ಎಲಾ, ಇದೇನು ಅನಾಹುತವು ? ಜಗನಾಯಕನು ವಿಶ್ವಾಸಘಾತಕನೇ ?' ಎಂದು ಗದರಿದನು.

—

## ೬. ಸಂಚು ಬಯಲಾಯಿತು

'ಜಗನಾಯಕನು ವಿಶ್ವಾಸಘಾತಕನೇ ?' ಅರಸನ ಈ ಮಾತು ಜಗನಾಯಕನ ಮರ್ಮವನ್ನು ಭೇದಿಸಿತು. ಲೋಭದ ಕವಚ ಕತ್ತರಿಸಿ ಹೋಯಿತು. ಅವನ ಹೃದಯು ಹೇಳಿತು; 'ಇಲ್ಲ ಜಗನಾಯಕನು ವಿಶ್ವಾಸಘಾತಕನಾಗಲಾರ' ಎಂದು ಆತನು ಖಡ್ಗವನ್ನು ನೆಲಕ್ಕೊಗೆದು ಸಾಗರಬಿದ್ದು ವೀರಭದ್ರನಾಯಕನ ಪಾದಗಳನ್ನು ಗಟ್ಟಿಯಾಗಿ ಹಿಡಿದು ಮೇಲೆ ತಲೆಯಿಟ್ಟು ಕಣ್ಣೀರುಗಳಿಂದ ಆ ಪಾದಗಳನ್ನು ತೊಳೆದನು.

ನಿಜವಾದ ಸ್ವಾಮಿಭಕ್ತನು ಸ್ವಲ್ಪಕಾಲ ದುಷ್ಟವಾದ ಸ್ವಾರ್ಥಕ್ಕಾಗಿ ಸ್ವಾಮಿದ್ರೋಹವನ್ನು ಬಗೆದರೂ ಆಪತ್ಕಾಲದಲ್ಲಿ ಸ್ವಾಮಿಗಾಗುವ ಕಷ್ಟವನ್ನು ನೋಡಲಾರನು. ಆತನು ಅ ಪ್ರಸಂಗದಲ್ಲಿ ಆಣೆಗೀಣೆಗಳನ್ನು ಬದಿಗೊತ್ತಿ ತನ್ನ ಸ್ವಾಮಿಯನ್ನು ರಕ್ಷಿಸುವನು. ಇಂದು ಜಗನಾಯಕನ ಸ್ಥಿತಿಯಾದರೂ ಹೀಗೆಯೇ ಆಯಿತು. ಆತನು ವೀರಭದ್ರನಾಯಕನ ನಚ್ಚಿನ ಸೇವಕನು. ಆದರೂ ವೀರಒಡೆಯರಿಗಾಗಿ ವೀರಭದ್ರನಾಯಕನನ್ನು ಸೆರೆಹಿಡಿದುಕೊಟ್ಟರೆ, ಶೈತೂರು ದುರ್ಗಕಂಪಣವನ್ನು ತನಗೇ ಉಂಬಳಿ ಹಾಕಿಕೊಡುವದಾಗಿ ಸದಾಶಿವನು ಹಚ್ಚಿದ ಆಸೆಯಿಂದ ಈ ದ್ರೋಹಕ್ಕೆ ಕೈ ಹಾಕಿದ್ದನು; ಒಡೆಯನ ಮೇಲೆ ಕೈ ಮಾಡಲು ಮನಸ್ಸು ಮಾಡಿದ್ದನು. ವೀರಭದ್ರರಾಜನು ಬರುವವರೆಗೆ ಆತನ ಈ ದುರ್ವಿಚಾರ ಅಚಲವಾಗಿಯೇ ಇತ್ತು. ಶಿವಪ್ಪನಾಯಕನಿಗೆ ನೆರವಾಗಿ ಅರಸನನ್ನು ಸೆರೆಹಿಡಿದುಕೊಡಬೇಕೆಂದೇ ಆತನ ಮನಸ್ಸು ! ಆದರೆ ಅದು ಅರಸನು ತನ್ನ ಮನೆಗೆ ಬಂದಮೇಲೆ ಹೊಯ್ದಾಡಿತು. ರಾಜನಿಗೆ ಹಾದಿಯಲ್ಲಿ ಒದಗಿದ ಪ್ರಸಂಗವನ್ನೂ ಕೇಳಿ, ಆತನ ತೇಜಸ್ಸು, ಶೌರ್ಯ,

ಸೌಜನ್ಯಾದಿಗಳನ್ನು ತಿಳಿದು ಜಗನಾಯಕನ ನಿರ್ಣಯ ಸಡಿಲಾಯಿತು. ಭೋಜನಾನಂತರ ಅರಸನೊಡನೆ ಮಾತನಾಡುತ್ತಿರುವಾಗ ಅವನ ಮನದಲ್ಲಿ ಹಲವು ಭಾವನೆಗಳ ತುಮುಲವೇ ನಡೆದಿತ್ತು. ಅರಸನ ಯಾವ ಮಾತಿನ ಕಡೆಗೂ ಅವನ ಲಕ್ಷವಿದ್ದಿಲ್ಲ. ಪ್ರತಿಜ್ಞೆ ಮಾಡಿದ್ದರಿಂದ ಮನಸ್ಸಿಲ್ಲದಿದ್ದರೂ ಸಂಚುಗಾರರೊಡನೆ ಸೇರಿ ಅರಸನನ್ನು ಬಂಧಿಸಲು ಸಿದ್ಧನೇನೋ ಆದನು. ಆದರೆ ನಿಜವಾದ ಸ್ವಾಮಿಭಕ್ತಿಯು ಹಾಗೆ ಮಾಡಗೊಡಲಿಲ್ಲ.

ಜಗನಾಯಕನ ಸ್ಥಿತಿಯನ್ನು ನೋಡಿ ಅವನ ದಂಡಾಳುಗಳು ಬೆಪ್ಪಾಗಿ ನಿಂತರು. ಅವರ ಖಡ್ಗಗಳು ತಮ್ಮಿಂದ ತಾವೇ ಒರೆಗಂಡವು. ಅರಸನೂ ಜಗನಾಯಕನೂ ಕೆಲಹೊತ್ತಿನವರೆಗೆ ಮಾತಾಡಲಸಮರ್ಥರಾಗಿದ್ದರು. ಆಮೇಲೆ ವೀರಭದ್ರನಾಯಕನೆಂದನು:

"ಇದೇನು ಜಗನಾಯಕಾ, ನೆನೆದದ್ದೇನು ?.... ಮಾಡಿದ್ದೇನು ?.... ಆದದ್ದೇನು ?"

"ಒಡೆಯರೆ, ತಣ್ಣೆಳಲನೀವ ನಿಲಯದ ನಡುಗಂಬವ ಕಡಿಯಲು ನೆಗೆದೆನು; ಅಮೃತವ ಕರೆದು ಜಗವ ರಕ್ಷಿಸುವ ಗೋಮಾತೆಯ ಕೊರಳ ಕೊಯ್ಯಲು ನೆನೆದೆನು, ನಮ್ಮನ್ನು ಮಕ್ಕಳಂತೆ ಸಲಹುವ ಸ್ವಾಮಿಗೆ ದ್ರೋಹವನ್ನು ನೆನೆದೆನು. ಈ ದೋಷಿಯ ಹೃದಯವನ್ನು ನೋಡಲು ಬಯಸದಿರ್ರಿ!"

"ಪಶ್ಚಾತ್ತಾಪದಿಂದ ನಿನ್ನ ದೋಷ ನಾಶವಾಗಿರುವದು."

"ಇಲ್ಲ ಪ್ರಭು, ನನ್ನ ಪ್ರಾಣನಾಶದಿಂದಲೇ ಈ ದೋಷ ನಾಶವಾಗುವದು."

"ಜಗಾ, ನಿನ್ನ ಸರಳ ಮನಸ್ಸನ್ನೂ ಸ್ವಾಮಿನಿಷ್ಠೆಯನ್ನು ನಾನು ಮೊದಲೇ ಅರಿತಿಲ್ಲವೇ ?"

"ಅದು ವಂಚನೆ ಪ್ರಭು ನನಗೆ ಮರಣದಂಡನೆ ವಿಧಿಸಬೇಕು. ಇಲ್ಲವೆ ನನ್ನ ಸರ್ವಾಪರಾಧಗಳನ್ನು ಕ್ಷಮಿಸಬೇಕು. ಇವನ್ನುಳಿದು ನನಗೆ ಬೇರೆ ಗತಿ ಇಲ್ಲ !"

"ಯಾವ ಬಲೆಗೋ ಒಳಗಾಗಿ ನೀನು ದ್ರೋಹ ಮಾಡಲಪೇಕ್ಷಿಸಿರಬಹುದು ! ಒಡನೆಯೇ ನಿನ್ನ ಮನಸ್ಸು ಅದಕ್ಕೆ ಹೇಸಿದೆ: ನಿನ್ನ ಅಪರಾಧವನ್ನು ಕ್ಷಮಿಸಿದ್ದೇನೆ. ಏಳು. ಇದರ ಮೂಲವೇನು ಹೇಳು."

ಅರಸನು ಜಗನಾಯಕನ ತೋಳುಗಳನ್ನು ಹಿಡಿದು ಎಬ್ಬಿಸಿದನು. ಅಲ್ಲಿ ನೆರೆದ ಜಗನಾಯಕನ ದಂಡಾಳುಗಳು ರಾಜನ ಹೆಸರಿನಿಂದ ಜಯಘೋಷ ವನ್ನು ಮಾಡಿ, ತಮ್ಮ ಖಡ್ಗಗಳನ್ನು ನೆಲಕ್ಕಿಟ್ಟು ಆತನಿಗೆ ನಮಸ್ಕರಿಸಿದರು. ಅರಸನು ಪ್ರಸನ್ನ ಮುಖದಿಂದ ಅವರ ಪ್ರಣಾಮಗಳನ್ನು ಸ್ವೀಕರಿಸಿದನು.

"ಒಡೆಯರೆ, ದುರ್ಘಟನೆಯನ್ನು ಹಿಂದಿನಿಂದ ವಿವರಿಸುವೆನು. ಮೊದಲು ತಿಮ್ಮನನ್ನು ಹಿಡಿಯೋಣ !" ಎಂದು ಜಗನಾಯಕನು ದಂಡಾಳು ಗಳ ಕಡೆಗೆ ಹೊರಳಿ "ಹಿಡಿಯಿರಿ ಆ ತಿಮ್ಮ ನಾಯಕನನ್ನು ನಡೆಯಿರಿ" ಎಂದು ಎದ್ದು ಹೊರಟನು.

"ಅಯ್ಯೋ! ಆ ಕೋಣೆಯಲ್ಲಿದ್ದ ಅನಾಥ ಬಾಲೆಯ ಗತಿಯೇನಾ ಯಿತೋ?"ಎನ್ನುತ್ತ ಅರಸನೂ ಅತ್ತ ಧಾವಿಸಿದನು.

ಎಲ್ಲರೂ ಆ ಬಾಗಿಲಿಗೆ ಬಂದರು. ಅಲ್ಲಿ ಯಾರೂ ಇಲ್ಲ; ಕೋಣೆಯಲ್ಲಿ ಆ ಯುವತಿಯೂ ಇಲ್ಲ; ಕೂಸೂ ಇಲ್ಲ. ಜಗನಾಯಕನು ಅರಸನಿಗೆ ಶರಣು ಹೋದದ್ದನ್ನು ನೋಡಿ, ತಿಮ್ಮನಾಯಕನು ಗಾಬರಿಯಾಗಿ ಅರಸನನ್ನು ಬಂಧಿಸುವ ವಿಚಾರವನ್ನು ಬಿಟ್ಟು, ಕೈಗೆ ಸಿಕ್ಕ ಬೇಟೆಯನ್ನು ತಕ್ಕೊಂಡು ತನ್ನ ಬೇಡರ ಜನರೊಡನೆ ಪಾರಾಗಿದ್ದನು ಜಗನಾಯಕನ ಭಟರು ಅವರನ್ನು ಹುಡುಕಿ ಹಿಡಿಯಲು ಕೋಟೆಯಲ್ಲಿ ನಡೆದರು. ವೀರಭದ್ರರಾಜನು ಆ ಬಾಲೆ ಯನ್ನು ಕಾಣದೆ ಕಳವಳಿಸಿ ನೆಲಕ್ಕೆ ಕುಳಿತುಬಿಟ್ಟನು. "ಪುಂಡರಿಂದ ಬಿಡಿಸಿ ತಂದ ಒಬ್ಬ ಅನಾಥೆಯನ್ನು ಪೂರ್ಣಗತಿಗೆ ಹಚ್ಚುವದಾಗಬಾರದೇ ನನ್ನಿಂದ? ಅವಳ ತಂದೆಯ ಪರಿಚಯವನ್ನು ಕೂಡ ತಿಳಿಯುವದಕ್ಕೆ ಅವಕಾಶವಿಲ್ಲದೆ ಹೋಯಿತಲ್ಲ! ಇದೇ ಏನು ಪ್ರಜಾರಕ್ಷಣೆಯನ್ನು ವಹಿಸಿದುದರ ಸಡಗರ? ಶಿವ ಶಿವಾ ನನ್ನ ಅರಸುತನವನ್ನೇನು ಸುಡಬೇಕು!" ಎನ್ನುತ್ತ ವ್ಯಥೆಪಡಹತ್ತಿದನು. 'ಈ ಅನರ್ಥಗಳ ಬೆಳವಣಿಗೆಗೆ ನಾನೇ ಕಾರಣನಾದೆನಲ್ಲ!' ಎಂದು ಹಲವು ಬಗೆಯಿಂದ ಹಳಿದುಕೊಳ್ಳುತ್ತ ಜಗನಾಯಕನು ನಿಂತಿದ್ದನು. ಸ್ವಲ್ಪ ಹೊತ್ತಿನ ಮೇಲೆ ಅರಸನೇ ಕೇಳಿದನು:

"ಜಗನಾಯಕಾ ಏನು? ಈ ಕೋಲಾಹಲದ ಮೂಲವೇನು? ನನ್ನ ದಳನಾಯಕರು, ದುರ್ಗಾಧಿಪತಿಗಳು ಹೀಗೇಕೆ ನನಗೆ ವೈರಿಗಳಾಗಿದ್ದಾರೆ?"

"ಪ್ರಭು, ತಮಗೆ ಏನೂ ಗೊತ್ತಿಲ್ಲ-ಗೊತ್ತಿಲ್ಲ! ದುರ್ವಿಚಾರಿಗಳು ತಮಗೆ ಮೋಸದ ಬಲೆಯನ್ನು ಬೀಸಿದ್ದಾರೆ. ಅದನ್ನು ರಚಿಸಿದವರು ತಮ್ಮ ಬೀಗರಾದ

ಸದಾಶಿವನಾಯಕರು. ತಾವೀಗ ಇಕ್ಕೇರಿಯ ಸಿಂಹಾಸನಕ್ಕೆ ಎರವಾಗಿದ್ದೀರಿ ಅಂದು ಮಂತ್ರಿಪದವು ತಮಗೆ ದೊರೆಯಲಿಲ್ಲವೆಂದು ಅಸಂತುಷ್ಟರಾದ ಸದಾಶಿವನಾಯಕರು ದೊಡ್ಡ ಕ್ರಾಂತಿಯನ್ನೇ ಹೂಡಿಬಿಟ್ಟಿದ್ದಾರೆ. ಒಳಗಿಂದೊಳಗೆ ಹಲವು ಜನ ಸರದಾರರನ್ನು ಹಲವು ಆಸೆಗಳನ್ನೊಡ್ಡಿ ಒಲಿಸಿಕೊಂಡಿದ್ದಾರೆ. ತಮಗೊಲಿಯದ ರಾಜನಿಷ್ಠ ಜನರಿಗೆ ಮಂಕುಬೂದಿಯನ್ನು ಬಡಿದಿದ್ದಾರೆ. ಪುಟ್ಟಣ್ಣನೂ ಅವರೂ ಕೂಡಿ ನೀವಿಲ್ಲದಾಗ ಲಿಂಗರಾಜನನ್ನೂ ಕೂಡ ವಂಚಿಸಿ ಹೊರಗೆ ಹಾಕಿ, ವೀರಒಡೆಯರನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿದ್ದಾರೆ. ತಮ್ಮನ್ನು ಬಂಧಿಸಲು ಹೊಂಚು ಹಾಕಿದ್ದಾರೆ. ನಾನೂ ಕ್ಷುದ್ರ ಆಶೆಗೆ ಮನಸೋತು ತಮ್ಮನ್ನು ಸೆರೆಹಿಡಿಯಲು ತಿಮ್ಮನಾಯಕನಿಗೆ ನೆರವಾಗುವೆನೆಂದು, ಸದಾಶಿವನಾಯಕರಿಗೆ ಆಣೆಮಾಡಿ ಮಾತುಕೊಟ್ಟೆನು ಒಡೆಯರ ಸೇವೆಯನ್ನು ದಕ್ಷತೆಯಿಂದ ಮಾಡಿ ಕೀರ್ತಿಪಡೆವುದೆತ್ತ? ಕೀಳಾಸೆಯಿಂದ ಒಡೆಯನ ವಿಶ್ವಾಸಘಾತಮಾಡಿ ಅಧಮನಾಗುವದೆತ್ತ? ಆನೆಯ ಮಾರಿ ಹಂದಿಯ ಕೊಳ್ಳುವಂತಾಯಿತೆನ್ನ ಮನದೆಣಿಕೆ! ಕರದಲ್ಲಿದ್ದ ಮರಕತಮಣಿಯನ್ನೆಸೆದು, ಕಾಜನು ಕೈಯಲಿ ಕೊಳ್ಳುವ ಮೂಢನಿಗೂ ನನಗೂ ಏನು ಭೇದ?...."ಕಣ್ತುಂಬಿ ಕಂಠವು ಬಿಗಿದು ಬಂದು ಮಾತು ಬಾರದಾದವು.

"ಜಗಾ, ಏಕೆ ಚಿಂತಿಸುವೆ? ನೀನು ಸಾಮಾನ್ಯ ಸ್ವಾಮಿಭಕ್ತನಲ್ಲವೆಂದು ನಿನ್ನ ವರ್ತನವೇ ಹೇಳುತ್ತದೆ. ಸ್ವಾರ್ಥದ ಬಲೆಗೆ ಸಿಕ್ಕಿರುವಾಗ–ವಚನಬದ್ಧನಾಗಿರುವಾಗ—ಸತ್ಯವನ್ನವಲಂಬಿಸಲು ನಿನ್ನ ಹೃದಯ ಹಾತೊರೆದು ಪರಿವರ್ತನೆಗೊಂಡುದು ಎಂತಹ ಸ್ವಾಮಿಭಕ್ತನನ್ನಾದರೂ ಹಿಂದೆ ಹಾಕದಿರದು! ನೀನು ಇಂತು ನಡೆಯದಿದ್ದರೆ ನಾನಿಂದು ಬದುಕುತ್ತಿದ್ದೆನೇ? ಈ ಮೋಸವನ್ನು ಅರಿಯುತ್ತಿದ್ದೆನೇ?"

"ಇದು ಪ್ರಭುವಿನ ಮನಸ್ಸಿನ ದೊಡ್ಡಸ್ತಿಕೆ!"

"ದೊಡ್ಡಸ್ತಿಕೆಯೇನು; ನಿಜಸಂಗತಿ ಜಗಣ್ಣ! (ನಿಡುಸುಯ್ದು) ತಿಮ್ಮನಾಯಕನೂ ಅಸಂತುಷ್ಟನಾಗಿಯೇ ಇರುತ್ತಿದ್ದನು."

"ರಾಜದ್ರೋಹಿಯಾದ ಇವನಪ್ಪನನ್ನು ತಮ್ಮ ಪಿತಾಮಹರು ಶಿಕ್ಷಿಸಿದ ಕುನಿಸಂತೆ ಇವನಿಗೆ! ತಮ್ಮ ಬಗ್ಗೆಯೂ ಸಂಶಯಭೂತಗ್ರಸ್ತನಾಗಿದ್ದಾನೆ. ಅದರಿಂದ ಸುಲಭವಾಗಿ ಕ್ರಾಂತಿಕಾರರ ಕೈವಶವಾಗಿದ್ದಾನೆ. ತಮ್ಮನ್ನು ಹಿಡಿದು

ಕೊಡುವೆನೆಂದು ಪ್ರತಿಜ್ಞೆಮಾಡಿದ್ದಾನೆ. ತನ್ನ ಗೆಳೆಯನನ್ನು ಜಂಗಮನ ವೇಷದಿಂದ ತಮ್ಮೆಡೆಗೆ ಕಳುಹಿ ಗುರುದರ್ಶನದ ಸುಳ್ಳುನೆವದಿಂದ ತಮ್ಮನ್ನು ಇಲ್ಲಿ ಸಿಕ್ಕಿಸಿ ಹಿಡಿಯಲು ಯತ್ನಿಸಿದನು. ನಾನು ಕೂಡ ಈ ಪಾದಕ್ಕೆ ದ್ರೋಹ ಬಗೆದೆನು........"

ಅಳುತ್ತ ಮತ್ತೆ ಕಾಲಿಗೆ ಬಿದ್ದನು. ರಾಜನು ಹಿಡಿದೆತ್ತಿ—

"ಪುನಃ ಅದನ್ನು ನೆನೆಯಬೇಡ ! ನೀನು ನನ್ನ ಪರಮ ಮಿತ್ರನು !"

"ಒಡೆಯರೆ,..ಕ್ರಾಂತಿಕಾರರನ್ನು ಮೊದಲು-ಕೂಡಲೆ-ದಂಡಿಸಬೇಕು."

"ಅವರು ಮಾಡಿದ್ದೇನು ? ವೀರ ಒಡೆಯರನ್ನು ಪಟ್ಟಕ್ಕೆ ಕಳ್ಳಿರಿಸಿದ್ದಾರೆ. ಆಗಲಿ. ಸಿಂಹಾಸನಕ್ಕೆ ಹಕ್ಕುದಾರರು ಅವರೇ ಅಲ್ಲವೇ ?"

"ನೀವಲ್ಲವೇ ಹಕ್ಕುದಾರರು ಮುತ್ತಜ್ಜರಾಳಿದ ರಾಜ್ಯಕ್ಕೆ ? ರಾಮರಾಜರೇಕೆ ಮಕ್ಕಳಾದ ಇವರನ್ನೂ ಬಿಟ್ಟು, ವೆಂಕಟರಾಜರಿಗೆ ರಾಜ್ಯವನ್ನೊಪ್ಪಿಸಿದರು ? ವೀರ ಒಡೆಯರು ಅಯೋಗ್ಯರೆಂದಲ್ಲವೇ ?"

"ಅವರು ಹಾಗೆ ಮಾಡಿರಬಹುದು. ಇವರಿಗೆ ರಾಜ್ಯವು ಬೇಕಾಗಿದೆ. ತಮ್ಮ ಸಿಂಹಾಸನವನ್ನು ತಾವು ಹಿಡಿದರೆ ತಪ್ಪೇನು ?"

"ಏನು ಮಾತು ಸ್ವಾಮೀ ? ರಾಜನಿಗಾಗಿ ರಾಜ್ಯವೇ ? ರಾಜ್ಯಕ್ಕೆ ರಾಜನು ! ಪ್ರಜಾ ಹಿತದಕ್ಷನು ರಾಜನು ! ಪ್ರಜೆಗಳೊಪ್ಪಿದರೆ ರಾಜನು ರಾಜ್ಯವಾಳಬಲ್ಲನು. ವೀರ ಒಡೆಯರು ವೃದ್ಧರು ಜನ್ಮರೋಗಿಗಳು. ಅವರಲ್ಲಿ ಯಾವ ಬಲವಿದೆ ? ರಾಜ್ಯವು ಬಾಯ್ದೆರೆದು ನಿಂತಿರುವ ಶತ್ರುಗಳ ವಶವಾಗದಿರುವದೇ ?"

" ನಾವಿರುವೆವಲ್ಲ, ಸ್ವರಾಜ್ಯಾಭಿಮಾನಿಗಳಾದ ನಾವು ಅದಕ್ಕೆ ಕೇಡೊದಗದಂತೆ ನೋಡಿಕೊಳ್ಳಬೇಕು."

"ಅದು ಹೇಗೆ ಸಾಧ್ಯವು ? ವೀರ ಒಡೆಯರ ಹೆಸರಿನಲ್ಲಿ ದುರಹಂಕಾರಿಗಳು ರಾಜ್ಯಭಾರ ನಡೆಸುತ್ತಿರುವಾಗ ನಮ್ಮ ವಿಚಾರಗಳು ಕಾರ್ಯಗತವಾಗುವವೇ ? ಆಗ ರಾಜ್ಯದಲ್ಲಿ ಅರಾಜಕತೆಯು- ಆಡಳಿತದಲ್ಲಿ ಗೊಂದಲ- ಉಂಟಾಗಿ ನೆಮ್ಮದಿಯು ಕೆಡದಿರುವದೇ ? ಹೀಗಾದಾಗ ತಾವು ರಾಜ್ಯದ ಆಡಳಿತಗಾರರನ್ನು ಎದುರಿಸಬೇಕೋ, ಸಮಯಸಾಧಿಸಿ ಏರಿ ಬರುವ ಪರರ

ದಾಳಿಗಳನ್ನು ಎದುರಿಸಬೇಕೋ ಹೇಳಿರಿ. ಅಂತಃಕಲಹದಲ್ಲಿ ಬೆಂದ ರಾಜ್ಯವನ್ನು ಶತ್ರುಗಳು ಸಹಜ ಜೀರ್ಣಿಸಿಕೊಳ್ಳಬಹುದು."

"ನೀನೆನ್ನುವದು ನಿಜ ಜಗಣ್ಣ ! ಅದರಲ್ಲಿಯೂ ಅರ್ಥವಿದೆ. ಅದನ್ನು ನಾವೆಲ್ಲರೂ ಕೂಡಿ ವಿಚಾರಿಸೋಣ ! ನನಗೀಗ ಮೊದಲು ಕಳವಳ ಇದು: ಇಕ್ಕೇರಿಯೊಡೆಯರ ರಕ್ಷಣೆಯಲ್ಲಿ ನಿರ್ಭಯಳಾದೆನೆಂದು ನಂಬಿ ನುಡಿದ ಒಬ್ಬ ಅನಾಥ ಬಾಲೆಯನ್ನು ಗತಿಗೆ ಹಚ್ಚುವದಾಗಲಿಲ್ಲ ನನ್ನಿಂದ! ನನ್ನಲ್ಲಿ ನಂಬಿಗೆಯನ್ನು ವ್ಯಕ್ತ ಮಾಡಿದ್ದೇನು ? ನನ್ನ ಅಜಾಗರೂಕತೆಯಿಂದ ಮತ್ತೆ ಅವಳು ಯಾತನೆಯ ಬಾಯ್ಗೆ ಬಿದ್ದದ್ದೇನು ? ಎಳೆ ಮಗುವಿನ ಗತಿಯೇನು ?"

ಒಡೆಯ, ಚಿಂತಿಸದಿರ್ರಿ ! ನನಗೆ ಅಪ್ಪಣೆಯಾಗಲಿ. ಎಲ್ಲಿದ್ದರೂ ಆ ತಾಯಿಯನ್ನು ಶೋಧಿಸಿ ರಕ್ಷಿಸುವೆನಲ್ಲದೆ ತಿಮ್ಮನನ್ನು ಹಿಡಿದು ತರುವೆನು. ತಾವು ವಿಶ್ರಾಂತಿಗೊಳ್ಳಿರಿ."

"ಬೇಡ, ನಾನು ಬೇಗ ಶಿಬಿರಕ್ಕೆ ಹೋಗಿ, ಈ ಕೆಲಸದ ವ್ಯವಸ್ಥೆಯನ್ನು ಮಾಡುತ್ತೇನೆ. ನೀನೆಂದಂತೆ ಬಂಡುಗಾರರು ಸುತ್ತಲೂ ವ್ಯಾಪಿಸಿಕೊಂಡಂತಿದೆ. ನೀನು ಈ ಶೈತೂರು ದುರ್ಗವನ್ನು ರಕ್ಷಿಸಿಕೊಂಡಿರು. ಮುಂದೆ ಶೈತೂರು ಕವಲಪುರ ಇವೇ ನಮ್ಮ ಮುಖ್ಯ ದುರ್ಗಗಳಾಗುವವು."

"ಆಗಬಹುದು. ಅಪ್ಪಣೆಯಂತೆ ನಡೆಯುವೆನು. ಆದರೆ ಇಲ್ಲಿಗೆ ಸಮೀಪವಾಗಿ ನೈಋತ್ಯದ ಮೂಲೆಯ ಮಧ್ಯದ ಕೊಳ್ಳದಲ್ಲಿ ತಿಮ್ಮನ ಆಶ್ರಯ ಸ್ಥಾನವೊಂದಿದೆ. ಅಲ್ಲಿ ಅವನು ಒಂದು ವೇಳೆ ನಮಗೆ ಸಿಗಬಹುದು. ಬೆಳಗು ಬರುವದರೊಳಗಾಗಿ ಐವತ್ತು ಜನ ರಾಹುತರೊಡನೆ ನಾನು ಅಲ್ಲಿಗೆ ಹೋಗಿ ಬರುವೆನು. ಅವನು ಅಲ್ಲಿ ಸಿಕ್ಕದಿದ್ದರೆ ಒಡೆಯರ ಆಲೋಚನೆಯಂತೆ ಮಾಡಬಹುದು."

ಅರಸನು ಒಪ್ಪಿದನು. ಅಷ್ಟರಲ್ಲಿ ಭಟರು, ನಗರದಲ್ಲಿ ತಿಮ್ಮನಾಯಕನ ಜನರು ಯಾರೂ ಇಲ್ಲವೆಂತಲೂ ಕೋಟೆಯ ಬಾಗಿಲನ್ನು ಭದ್ರಪಡಿಸಿದೆವೆಂತಲೂ ಅರುಹಿದರು. 'ಹೋಗಲಿ, ತ್ವರೆಯಿಂದ ನಾವೂ ಅವರನ್ನು ಬೆನ್ನಟ್ಟುವಾ' ಎಂದು ಅರಸನ ಮೈಗಾವಲಿಗೆ ಸಾಕಷ್ಟು ಭಟರನ್ನು ಬಿಟ್ಟು ಉಳಿದ ರಾಹುತರ ಪಡೆಯೊಡನೆ ಕೋಟೆಯಿಂದ ಹೊರಬಿದ್ದು ನಡೆದನು.

ಅರಸನು ಮರಳಿ ಬಂದು ಮಂಚದ ಮೇಲೆ ಮಲಗಿದನು. ನಿದ್ರೆ ಹೇಗೆ ಬರಬೇಕು ? ಸದಾಶಿವನ ಸಂಚಿನ ವಿಷಯವೊಂದು ಕಡೆ; ವೀರ ಒಡೆಯರ ಪಕ್ಷವನ್ನು ಎದುರಿಸಬೇಕೋ ಬಾರದೋ ಎಂಬುದು ಅದರ ವಿಚಾರ ! ಅಪಹೃತ ತರುಣಿಯ ವಿಷಯ ಇನ್ನೊಂದು ಕಡೆ, ಅವಳ ಗತಿ ಏನಾಯಿತೋ ಸಿಗುವಳೋ ಸಿಗಳೋ ಎಂಬುದು ಇದರ ವಿಚಾರ! ಅವಳ ಕರುಣಕಥೆ ಇನ್ನೂ ಕರ್ಣದಲ್ಲಿ ನಿನದಿಸುತ್ತದೆ. ದೈನ್ಯಾವಸ್ಥೆ ಕಣ್ಣಲ್ಲಿ ನೆಟ್ಟುನಿಂತಿದೆ. ಆಕೆಯ ಮಾತಿನಲ್ಲಿ ಪ್ರೇಮ-ವಿನಯ-ಸೌಜನ್ಯಗಳು, ನಿರ್ಮಲರೂಪವು ಅರಸನನ್ನು ಆಕರ್ಷಿಸಿದ್ದವು. ಅವಳಾರ ಮಗಳೆಂಬುದು ತಿಳಿಯದಿದ್ದುದೂ ಇನ್ನಿಷ್ಟು ಕಾತರಕ್ಕೆ ಕಾರಣವಾಗಿತ್ತು. ಆಕೆಯನ್ನು ಕಾಪಾಡುವ ನೈತಿಕ ಭಾವನೆ ವಿಫಲಗೊಂಡಿತ್ತು. ಮನಸ್ಸು ಹೀಗೆ ತಲ್ಲಣಗೊಂಡು ತಳಮಳಿಸಿದನು. ಆದರೂ ದಣಿವಿನ ಪರಿಣಾಮವಾಗಿ ಹೇಗೋ ಸ್ವಲ್ಪ ನಿದ್ರೆ ಕೊನೆಗೆ ಬಂದಿತು. ತುಸು ವಿಶ್ರಾಂತಿಯು ದೊರೆಯಿತು.

ಬೆಳಗಾಗುವ ಮೊದಲು ಜಗನಾಯಕನು ಮರಳಿ ಬಂದನು. ತಿಮ್ಮನಾಯಕನು ಸಿಗಲಿಲ್ಲ. ಜಗನಾಯಕನು ಅರಸನಿಗೆ ಅನುಕೂಲವಾದುದನ್ನು ನೋಡಿ ಆತನು 'ಇನ್ನು ತನ್ನ ಮೊದಲಿನ ಸ್ಥಳದಲ್ಲಿದ್ದರೆ ಅವರ ಕೈಗೆ ಸಿಕ್ಕಬಹು'ದೆಂದು ಕೂಡಲೆ ಬೇರೊಂದು ದಾರಿಯಿಂದ ಮತ್ತೊಂದು ಸ್ಥಳಕ್ಕೆ ಪಾರಾಗಿ ಹೋಗಿ ಬಿಟ್ಟಿದ್ದನು.

ಹೊತ್ತು ಹೊರಡುವ ಮೊದಲೆ ಅರಸನು ಸಿದ್ಧನಾಗಿ ತನ್ನ ಶಿಬಿರಕ್ಕೆ ನಡೆದನು. ಜಗನಾಯಕನು ಬೇರೆ ಐವತ್ತು ಜನ ಭಟರನ್ನು ಅರಸನ ಬೆಂಗಾವಲಿಗೆ ಕಳುಹಿದನು. ಅರಸನು ಆತನ ಸೂಚನೆಯಂತೆ ಬಂದದಾರಿಯನ್ನು ಬಿಟ್ಟು ಸ್ವಲ್ಪ ಸುತ್ತಿನ ಬೇರೊಂದು ದಾರಿಯಿಂದ ನಡೆದು ಪಾಳೆಯವನ್ನು ಮುಟ್ಟಿದನು.



## ೭. ಸಹನೆ

ಅರಸನು ಗುರುದರ್ಶನಕ್ಕೆಂದು ತೆರಳಿದ್ದರಿಂದ, ಪಾಳೆಯವು ಮತ್ತೆರಡು ದಿವಸ ತುಂಗಾತೀರದಲ್ಲಿಯೇ ಉಳಿಯುವದಾಯಿತು. ಆ ರಮ್ಯಪ್ರದೇಶದಲ್ಲಿ ನಲಿದಾಡಲು ಅವಕಾಶ ಸಿಕ್ಕಿತೆಂದು ಶಿಬಿರದ ಜನವೆಲ್ಲ ಆ ದಿನ ರಾತ್ರಿ ಆನಂದದಿಂದ ಕಳೆದರು. ಮರುದಿನ ಮೂರು ತಾಸು ಹೊತ್ತು ಏರಿತ್ತು. ಮಂತ್ರಿ ಶಂಕರನಾರಾಯಣನು ರಾಜಶಿಬಿರದ ಮೊಗಸಾಲೆಯಲ್ಲಿ ಕುಳಿತಿದ್ದನು. ದ್ವಾರರಕ್ಷಕನು, ಕಂಡಲೂರಿಂದ ಬಂದ ಇಬ್ಬರು ರಾಹುತರನ್ನು ಕರಕೊಂಡು ಬಂದನು. ಅವರು ರಾಜನಿಗಾಗಿ ತಂದ ಪತ್ರವನ್ನು ಮಂತ್ರಿಯ ಕೈಯಲ್ಲಿ ಕೊಟ್ಟರು. ಸೇನಾಪತಿ ಲಿಂಗರಸನ ಕಡೆಯಿಂದ ಬಂದುದನ್ನು ಆತನು ಕಂಡಲೂರಲ್ಲಿ ಇರುವದನ್ನೂ ಅವರಿಂದ ಕೇಳಿ ಮಂತ್ರಿ ಚಕಿತನಾದನು. ಇದೇನೋ ರಾಜಕೀಯ ಗೊಂದಲದ ಪ್ರಸಂಗವಿರಬಹುದೆಂದು, ಪ್ರಸಂಗಾವಧಾನದಿಂದ ಅದನ್ನು ತಾನೇ ಬಿಚ್ಚಿ ಓದಿದನು.

'ಶ್ರೀ ರಾಜಮಣಿ ಕೆಳದೀಶ ವೀರಭದ್ರನಾಯಕರ ಪಾದಸೇವೆಗೆ–ಸೇವಕನು ಅರಿಕೆ ಮಾಡುವದೇನಂದರೆ– ಒಡೆಯರೆ ನಾನು ಮೋಸಹೊಂದಿ ತಮ್ಮ ಸೇವೆಯಲ್ಲಿ ಭಂಗತಂದುಕೊಂಡೆನು. ಮೋಸದ ಬಲೆಯಲ್ಲಿ ಬಿದ್ದ ನನ್ನ ಬುದ್ಧಿ, ಜಾಗ್ರತೆ, ಶೌರ್ಯ ಇವೆಲ್ಲವು ಹಾಳಾಗಿ ಹೋದವು. ನಾನೂ ನನ್ನ ಕೈಕೆಳಗಿದ್ದ ಸೈನ್ಯವೂ ತಮ್ಮ ಅಹಿತಕ್ಕೆ ಕಾರಣರಾದೆವು. ತಮ್ಮ ಮಾಮಂದಿರು ಕಂಡಲೂರ ಚೆನ್ನನಾಯಕರು ಪರಾಕ್ರಾಂತರಾಗಿ, ತಮ್ಮ ಸಹಾಯಕ್ಕೆ ಬರಬೇಕೆಂದು ಬರೆದಂತಹ ಒಂದು ಪತ್ರವನ್ನೂ, ಅವರ ಸಹಾಯಕ್ಕಾಗಿ ಒಮ್ಮಿಂದೊಮ್ಮೆ ಹೋಗಬೇಕೆಂದು ತಾವು ನನಗೆ ಆಜ್ಞೆ ಕಳಿಸಿದಂತೆ ಇರುವ

ಇನ್ನೊಂದು ಪತ್ರವನ್ನೂ ಮೋಸಗಾರರು ನನಗೆ ಮುಟ್ಟಿಸಿ, ನಾನು ಸೈನ್ಯ ದೊಡನೆ ಕಂಡಲೂರಿಗೆ ಬರುವಂತೆ ಮಾಡಿವರು. ಹೀಗೆ ನನ್ನನ್ನು ಮೋಸ ದಿಂದ ಹೊರಗೆ ಹಾಕಿ ರಾಜಧಾನಿಯಲ್ಲಿ ಕ್ರಾಂತಿಯನ್ನೆಸಗಿದ್ದಾರೆ ಅವರು. ನನಗೆ ಸಂತಾಪವಾಗುತ್ತದೆ; ಈಗ ತಮ್ಮ ಅಪ್ಪಣೆಯಾಗಲಿ! ಅಲ್ಪಾವಕಾಶ ದಲ್ಲಿ ಇಕ್ಕೇರಿಯನ್ನು ಹೊಕ್ಕು ಕ್ರಾಂತಿಕಾರರನ್ನೆಲ್ಲ ಹಿಡಿದು ತಮ್ಮ ಪಾದಸನ್ನಿ ಧಿಗಿಕ್ಕುವೆನು. ಚಿತ್ತಕ್ಕೆ ಅರಿಕೆಯಿರಬೇಕು. ಬೇಗ ಅಪ್ಪಣೆಯಾಗಬೇಕೆಂದು ಬೇಡಿಕೊಳ್ಳುವೆ.'

'ಸೇವಕ ಲಿಂಗಣ್ಣ.'

ಮಂತ್ರಿಯು ಗಾಬರಿಯಾದನು. ರಾಜಧಾನಿಯಲ್ಲಿ ಕ್ರಾಂತಿಯನ್ನು ಹೂಡಿದವನು ಸದಾಶಿವನೇ ಆಗಿರಬೇಕೆಂದು ಊಹಿಸಿದನು. ಇಂಥ ಪರಿಸ್ಥಿತಿ ಯಲ್ಲಿ ಅರಸನು ಸ್ವಲ್ಪ ಜನರೊಡನೆ ಮೂಲೆಯಲ್ಲಿ ಪ್ರಯಾಣವನ್ನು ಕೈಕೊಂಡ ದ್ದು ಒಳಿತಲ್ಲವೆಂದು ಆತನು ಚಿಂತೆಯೊಳಗಾದನು. ಉಳಿದದ್ದೆಲ್ಲ ಆಮೇಲಿರಲಿ; ಮೊದಲು ಅರಸನ ರಕ್ಷಣೆಗಾಗಿ ಶೈಲಪುರದ ಕಡೆಗೆ ಹೆಚ್ಚಿನ ಭಟರನ್ನು ಕಳಿಸ ಬೇಕೆಂದು ಕೂಡಲೆ ನಿಶ್ಚಯಿಸಿದನು. ದಳನಾಯಕರನ್ನು ಕರೆಯ ಕಳುಹಿಸಿದನು. ಅಷ್ಟರಲ್ಲಿ ಅರಸನ ಆಗಮನದ ಭೇರಿ ಮೊಳಗಿತು. ರಾಜಸನ್ನಿಧಿಯ ಪತಾ ಕೆಯು ಮುಂದಿನ ಮಹಾದ್ವಾರದ ಮೇಲೆ ಹಾರಿತು. ಅದರಿಂದ ಶಂಕರನಾರಾ ಯಣನು 'ಏನೇ ನಡೆದಿರಲಿ, ಅರಸರಂತೂ ಬಂದರು' ಎಂದು ಸಮಾಧಾನ ದಿಂದ ಹೊರಗೆ ಬಂದನು. ಅಷ್ಟರಲ್ಲಿ ವೀರಭದ್ರನಾಯಕನು ಕುದುರೆಯನ್ನು ಇಳಿಯುತ್ತಿದ್ದನು.

"ಒಡೆಯರಿಗೆ ಜಯವಾಗಲಿ! ತಮ್ಮ ಬರವಿಗಾಗಿ ಆತುರದಿಂದ ಕಾದಿ ದ್ದೆವು."

"ಬಂದೆನು ಮಂತ್ರಿಗಳೇ! ಹಿರಿಯರಾದ ನಿಮ್ಮೆಲ್ಲರ ಆಶೀರ್ವಾದವಿತ್ತು!! ಮರಣವೊ ಬಂಧನವೊ? ತಪ್ಪಿ, ಮರಳಿ ಬಂದಿದ್ದೇನೆ."

"ದೇವರ ದಯೆ ಒಡೆಯರೆ, ಕ್ರಾಂತಿಯ ಹುಯ್ಲು ನನಗೆ ತಿಳಿದದ್ದು ಒಂದೇ ಗಳಿಗೆಯ ಹಿಂದೆ! ಈಗ ಮೊದಲು ತಮ್ಮ ಕ್ಷೇಮದ ಬಗೆಗೇ ಚಿಂತೆ ಯಾಗಿತ್ತು."

"ಕ್ರಾಂತಿಕಾರರ ಬಯಕೆ ನೆರವೇರಲಿ, ಅವರು ನಮ್ಮನ್ನು ಪೀಡಿಸ ದಿದ್ದರೆ ಸಾಕು. ಒಂದು ಬಗೆಯಿಂದ ಅವರು ಈಗ ನಮ್ಮ ಹೊರೆಯನ್ನೇ ನಮ್ಮ ತಲೆಯಿಂದ ಇಳುಹಿದ್ದಾರೆನ್ನಬಹುದು........" ಎನ್ನುತ್ತ ಒಳಗೆ ನಡೆದನು ವೀರಭದ್ರನಾಯಕನು.

ಇಬ್ಬರೂ ಮೊಗಸಾಲೆಗೆ ಬಂದು ಕುಳಿತರು. ಶಂಕನಾರಾಯಣನು ಲಿಂಗರಾಜನ ಪತ್ರವನ್ನು ಕೊಟ್ಟನು. ವೀರಭದ್ರನಾಯಕನು ಅದನ್ನು ಓದಿಕೊಂಡನು. ಬಳಿಕ 'ಈ ಕ್ರಾಂತಿಯ ಹಾವಳಿಯು ತನ್ನ ಮೇಲೆಯೂ ಹಾಯ್ದು ಹೋಯಿತು' ಎಂದು, ಗುರುದರ್ಶನಕ್ಕೆಂದು ತನ್ನನ್ನು ಕರೆ ದೊಯ್ದುದು ವಂಚನೆ ಎಂಬುದನ್ನು, ಹಾದಿಯಲ್ಲಿ ನಡೆದುದನ್ನು, ಶೈತೂರಲ್ಲಿ ತನ್ನ ಮೇಲೆ ದಾಳಿಯಾದಾಗ, ಜಗನಾಯಕನ ಮನಸ್ಸು ಪರಿಶುದ್ಧಗೊಂಡು ತಾನು ಪಾರಾದುದನ್ನು ಆ ಸಂದರ್ಭದಲ್ಲಿ ಆ ಅನಾಥೆಯು ಮತ್ತೆ ಅಪಹೃತ ಳಾದುದನ್ನು ವಿವರಿಸಿದನು. ಶಂಕರನಾರಾಯಣನು ಚಿಂತೆ-ಯೋಚನೆಗಳಲ್ಲಿ ಮುಳುಗಿಬಿಟ್ಟನು.

"ಆಗಲಿ, ಎಲ್ಲ ದಳಪತಿಗಳನ್ನೂ ಹಿರಿಯ ಅಧಿಕಾರಿಗಳನ್ನೂ ಕರೆ ಯಿರಿ. ನಾನೂ ಈಗಲೇ ಬರುವೆನು. ಮುಂದಾಲೋಚನೆ ಮಾಡೋಣ" ಎಂದು ಅರಸನು ತನ್ನ ನಿವಾಸಕ್ಕೆ ನಡೆದನು. ಸ್ನಾನಮಾಡಿ ಅಲ್ಪಾಹಾರ ವನ್ನು ಸ್ವೀಕರಿಸಿ ಪ್ರಯಾಣದ ಆಯಾಸವನ್ನು ನೀಗಿದನು.

ಅಷ್ಟರಲ್ಲಿ ಮಂತ್ರಿಯು ಎಲ್ಲ ದಳಪತಿಗಳನ್ನೂ ಅಧಿಕಾರಿಗಳನ್ನೂ ಕರೆಯಿಸಿಕೊಂಡು ಓಲಗದ ಗೂಡಾರದಲ್ಲಿ ಬಂದು ಕುಳಿತನು. ಅರಸು ಬಂದೊಡನೆ ಮುಂದಿನ ವಿಚಾರ ನಡೆಯಿತು. ಅರಸು-ಮಂತ್ರಿಗಳನ್ನುಳಿದು ಉಳಿದೆಲ್ಲರ ಅಭಿಪ್ರಾಯ ಒಂದೇ ಬಗೆಯದಾಗಿತ್ತು; ಎಲ್ಲ ಸೈನ್ಯವನ್ನು ಒಟ್ಟುಗೂಡಿಸಿ, ಒಮ್ಮೆಲೇ ಇಕ್ಕೇರಿಯ ಮೇಲೆ ಬಿದ್ದು ಕ್ರಾಂತಿಕಾರರನ್ನೆಲ್ಲ ಮುರಿಬಡಿಯಬೇಕೆಂದು ಶಂಕರನಾರಾಯಣನು ಕೇಳುತ್ತ ಕೇಳುತ್ತ ಗಂಭೀರ ವಾಗಿ ಯೋಚಿಸುತ್ತಿದ್ದನು. ನಡುನಡುವೆ ಅರಸನ ಮುಖಾವಲೋಕನ ಮಾಡುತ್ತಿದ್ದನು.

ವೀರಭದ್ರರಾಜನಿಗೆ ದಳನಾಯಕರ ಈ ಆತುರವು ಸರಿ ಕಾಣಲಿಲ್ಲ. ಆತನೆಂದನು : "ಒಡೆಯರೇ ಒಂದು ರೀತಿಯಿಂದ ಹಕ್ಕುದಾರರೊಬ್ಬ ಮೇಲೆ

ಅವರೇ ರಾಜ್ಯವನ್ನಾಳಬಾರದೇಕೆ? ಬಹು ದಿವಸಗಳಿಂದ ಇಚ್ಛಿಸುತ್ತಿದ್ದ ರಾಜವೈಭವದ ಸುಖವನ್ನು ಅವರು ಭೋಗಿಸಲಿ! ಸದಾಶಿವನೂ ಮಂತ್ರಿಯಾಗಿ ಸುಖಿಸಲಿ! ಅನುಭವಿಸಲಿ! ಅದಕ್ಕೆ ನಾವೇಕೆ ಅಡ್ಡ ಬರಬೇಕು?"

ಅಂತಃಕಲಹದಿಂದ ರಾಜ್ಯವು ರಸಾತಲಕ್ಕಿಳಿಯಬಾರದೆಂದು ವೀರಭದ್ರ ನಾಯಕನು ಹೀಗೆ ಮನಸ್ಸು ಮಾಡಿದನು. ಈ ಔದಾರ್ಯವು ಬೇರೆ ರಾಜರಲ್ಲಿರುವದು ವಿರಳ! ರಾಜ್ಯದ ಸಲುವಾಗಿ ತಂದೆಯನ್ನು ಬಂಧಿಸಿ, ಬಂಧುಗಳನ್ನು ಘಾತಿಸಿ, ರಾಜಸುಖವನ್ನು ಪಡೆದ ರಾಜರೂ ಹಲವರುಂಟು. ತಾನು ವೀರನು, ಪ್ರಜಾರಂಜಕನು, ರಾಜ್ಯಭಾರ ವಹಿಸಲಿಕ್ಕೆ ಸಮರ್ಥನು ಆಗಿದ್ದರೂ ಕೇವಲ ಅಂತಃಕಲಹಕ್ಕೆ ಹೇಸಿ, ರಾಜಾಧಿಕಾರವನ್ನು ತಿರುಗಿ ತಕ್ಕೊಳ್ಳಲು ಇಚ್ಛಿಸದ ವೀರಭದ್ರನಾಯಕನ ಉದಾತ್ತತೆಯನ್ನು ವರ್ಣಿಸಲೇಬೇಕು. ಆದರೆ ಮಂತ್ರಿಯು ಅರಸನ ಈ ಔದಾರ್ಯವನ್ನು ಕೊಂಡಾಡಿದರೂ ಈಗ ಇದೇ ಧೋರಣ ಕೈಕೊಳ್ಳುವದನ್ನು ಆತನು ಒಪ್ಪಲಿಲ್ಲ. ಈಗ ಕ್ರಾಂತಿಕಾರರಿಂದ ತಮ್ಮ ರಕ್ಷಣೆ, ಇದೆಲ್ಲದರ ವೆಚ್ಚ, ಅಲ್ಲಿಯ ಆಡಳಿತವು ಹದಗೆಟ್ಟರೆ ತಮಗೂ ಒದಗುವ ಕಷ್ಟ, ತಮ್ಮ ಮೇಲೆ ಬರುವ ಅಪಕೀರ್ತಿ, ಮುಂತಾದವುಗಳ ವಿಚಾರವನ್ನು ಮಂತ್ರಿಯು ಮುಂದಿಟ್ಟನು. ಅರಸನು ಅವುಗಳನ್ನು ವಿಚಾರಿಸತಕ್ಕುದೆಂದನು. ಕೊನೆಗೆ ನಿರ್ಣಯವಾದುದು ಇಂತು:

'ವೀರ ಒಡೆಯರ ಆಳಿಕೆಯನ್ನು ಈಗ ನಡೆಯಗೊಡಬೇಕು. ಕವಲಪುರ-ಶೈತೂರು ಈ ಎರಡು ದುರ್ಗಗಳನ್ನೂ ಅವುಗಳ ಕೆಳಗಿನ ಪ್ರದೇಶವನ್ನೂ ನಮ್ಮ ವಶದಲ್ಲಿಟ್ಟುಕೊಳ್ಳಬೇಕು. ಈ ದುರ್ಗಗಳಲ್ಲಿ ಸೈನ್ಯವನ್ನಿಟ್ಟು ಕವಲಪುರವನ್ನು ಮುಖ್ಯಸ್ಥಳ ಮಾಡಬೇಕು. ನಮ್ಮ ಆಶ್ರಯಕ್ಕೆ ಬರುವವರಿಗೆ ಆಸರಗೊಡಬೇಕು. ಇಕ್ಕೇರಿಯ ಆಡಳಿತವು ಸರಿಯಾಗಿ ನಡೆದರೆ ನಡೆಯಲಿ, ಒಂದು ವೇಳೆ ಅದು ಕೆಟ್ಟರೆ, ಆ ಸಂಧಿಯನ್ನು ಸಾಧಿಸಿ ಪರ ಶತ್ರುಗಳು ದಾಳಿಯಿಟ್ಟರೆ ಅದನ್ನು ನಾವು ತಡೆಯಬೇಕು. ಆ ಆಡಳಿತವು ತೀರ ಅಸಮರ್ಥವಾಗಿ ಕುಸಿದರೆ ನಾವು ವಹಿಸಿಕೊಳ್ಳಬೇಕು.'

ಈ ನಿರ್ಣಯಕ್ಕನುಸರಿಸಿ ಲಿಂಗರಾಜನಿಗೆ 'ಇಕ್ಕೇರಿಯನ್ನು ವಶಪಡಿಸಿಕೊಳ್ಳುವ ವಿಚಾರವನ್ನು ಬಿಟ್ಟು, ಕೂಡಲೆ ಕವಲಪುರಕ್ಕೆ ಬಂದು ತಮ್ಮನ್ನು ಕೂಡಬೇಕು' ಎಂದು ಆಜ್ಞಾಪತ್ರವು ಬರೆದು ಸಿದ್ಧವಾಯಿತು. ನಾಳೆ ಪಾಳೆ

ಯುವ ಜನರ ಸಭೆ ನೆರೆಸಿ, ತಮ್ಮ ಮನೆ ಮಾರು ವ್ಯವಹಾರಗಳಿಗಾಗಿ ಇಕ್ಕೇರಿಗೆ ಹೋಗಬಯಸುವವರಿಗೆ ಅಪ್ಪಣೆಕೊಡುವದೆಂದೂ, ಶರಜರಾಯನು ನೂರುಜನ ಅಶ್ವಾರೋಹಿಗಳೊಡನೆ ತಿಮ್ಮನಾಯಕನನ್ನು ಶೋಧಿಸಿ, ಆ ಹೆಣ್ಣುಮಗಳ ಬಂಧವಿಮೋಚನೆ ಮಾಡಲು ನಾಳೆಯೇ ಹೊರಡುವದೆಂದೂ, ನಾಡದು ಬೀಡಾರವನ್ನು ಕಿತ್ತು ಕವಲಪುರಕ್ಕೆ ಪ್ರಯಾಣ ಮಾಡುವದೆಂದೂ ಗೊತ್ತಾಗಿ ಎಲ್ಲರೂ ಊಟಕ್ಕೆದ್ದರು ನಾಲ್ಕು ಜನ ರಾಹುತರು ಲಿಂಗರಾಜನ ಕಡೆಗೆ ಆಜ್ಞಾಪತ್ರವನ್ನು ತಕ್ಕೊಂಡು ನಡೆದರು

ಬಿಸಿನೆತ್ತರದ ತರುಣ ಅಭಿಮಾನಿ ಯೋಧರಿಗೆ ಈ ಸಹನೆಯ ಯೋಜನೆ ಸಮಾಧಾನ ಮಾಡಲಿಲ್ಲ ಆದರೂ ಅರಸನ ಮೇಲಿನ ಭಕ್ತಿಯಿಂದ ಅದನ್ನು ಸಹಿಸಿಕೊಂಡರು. ಊಟವೇನೊ ಮುಗಿಯಿತು ಉತ್ಸುಕತೆಯುಳಿದುದರಿಂದಲೂ ಬೇಸಿಗೆಯ ಕಾಲವಾದುದರಿಂದಲೂ ಅವರು ಬಹಳ ಹೊತ್ತು ಗೂಡಾರದಲ್ಲಿಯೇ ಇದ್ದರು. ಆದರೂ ದಿನದ ಕೆಲಸಗಳೆಲ್ಲಿ ನಿಲ್ಲುವವು ? ಸಂಜೆಗೆ ಸಂಜೆಯ ಕಾರ್ಯಗಳು ನಡೆದು, ಎತ್ತು–ಆನೆ–ಕುದುರೆಗಳ ಆಹಾರ ವ್ಯವಸ್ಥೆಯಾಯಿತು. ಎಲ್ಲರ ಊಟವಾಯಿತು. ವಿನೋದೋಲ್ಲಾಸಗಳು ಅಷ್ಟು ಕಂಡುಬರಲಿಲ್ಲ. ಜನವೆಲ್ಲ ಮೌನದಲ್ಲಿ ತಮ್ಮ ಕಾರ್ಯಗಳನ್ನು ನೆರವೇರಿಸಿದರು. ಭಟರು ಬೀಡಾರದ ಸುತ್ತಲೂ ಶಸ್ತ್ರಸಜ್ಜಿತರಾಗಿ ಮಲಗಿಕೊಂಡರು. ಪೂರ್ವ ರಾತ್ರಿಯಲ್ಲಿ ಮೂವತ್ತು ಜನ, ಉತ್ತರ ರಾತ್ರಿಯಲ್ಲಿ ಮೂವತ್ತು ಜನ ರಾಹುತರು ಸುತ್ತಲೂ ಸಂಚರಿಸುತ್ತ 'ಪಹರೆ' ಮಾಡುವಂತೆ ಗೊತ್ತಾಗಿತ್ತು. ಒಳಗೆ ಬರುವ ನಾಲ್ಕುದಿಕ್ಕಿನ ಮಹಾದ್ವಾರಗಳಲ್ಲಿ ಇಬ್ಬಿಬ್ಬರಂತೆ ಎಂಟು ಜನರು ಯಾವಾಗಲೂ ಜಾಗ್ರತರಾಗಿದ್ದು ದ್ವಾರರಕ್ಷಣೆ ಮಾಡುವವರಾದರು. ಅಂದು ಅರಸು ಡೇರೆಯಲ್ಲಿ ವೀರಭದ್ರನಾಯಕನು ಮುಖ್ಯರಾದವರೊಡನೆ ಮಾತನಾಡುತ್ತ ಬಹಳ ಹೊತ್ತಿನವರೆಗೆ ಕುಳಿತಿದ್ದನು. ರಾತ್ರಿಯು 5 ತಾಸುಗಳನ್ನು ಮಿಕ್ಕಿದುದು ಅವರಿಗೆ ಗೊತ್ತೇ ಆಗಿರಲಿಲ್ಲ. ಅಷ್ಟರಲ್ಲಿ ಇದೇನು ಒಮ್ಮಿಂದೊಮ್ಮೆ ಭಯಂಕರ ? ?

ದಕ್ಷಿಣ ಮಹಾದ್ವಾರದ ರಕ್ಷಕನು ಭಯಸೂಚಕ ಕಹಳೆಯನ್ನು ಊದಿದನು. ಅದನ್ನು ಕೇಳಿ ವಿಚಾರ ಮಾರ್ಗದಲ್ಲಿ ನಡೆದಿದ್ದ ಅರಸು ಮೊದಲಾದವರು ದಿಗ್ಗನೆ ಎದ್ದು ನಿಂತರು. ದಳಪತಿಗಳು ಒರೆಯಿಂದ ಖಡ್ಗ ಹಿರಿ

ಯುತ್ತ ತತ್‌ಕ್ಷಣದಲ್ಲಿ ಹೊರಬಿದ್ದು ನಡೆದರು. ವೀರಭದ್ರನಾಯಕನೂ ಶಂಕರನಾರಾಯಣನೂ ಅವರ ಹಿಂದಿನಿಂದ ಹೊರಟರು. ಕೆಲ ಹೊತ್ತಿನಲ್ಲಿಯೇ ದಕ್ಷಿಣದ ದ್ವಾರದ ಹತ್ತಿರ ರಣಭೇರಿಯು ಗರ್ಜಿಸತೊಡಗಿತು ಎಲ್ಲ ಸೈನಿಕರು ಯುದ್ಧಸನ್ನದ್ಧರಾಗತೊಡಗಿದರು. ಆದರೆ ಯುದ್ಧದ ಸುದ್ದಿಯನ್ನರಿಯದೆ ನೈವುರೆತು ಮಲಗಿದವರು ತುಸು ಪೇಚಾಡಬೇಕಾಯಿತು. ವೈರಿಗಳು ಶಿಬಿರದ ದಕ್ಷಿಣ ಭಾಗದ ಮೇಲೆ ಭರದಿಂದ ಬಿದ್ದು ಕೊಲೆಯನ್ನಾರಂಭಿಸಿದರು. ದಳನಾಯಕ ಸಬಳರಾಯನು ಅಷ್ಟರಲ್ಲಿಯೇ ವ್ಯವಸ್ಥೆ ಮಾಡಿಕೊಂಡು ವೈರಿಗಳನ್ನು ಎದುರಿಸಹತ್ತಿದನು. ಶರಜರಾಯನು ತೀಕ್ಷ್ಣವೇಗದ ಕುದುರೆಯನ್ನೇರಿ ಪಾಳಯದಲ್ಲೆಲ್ಲ ಸಂಚರಿಸಿ ಒದಗಿದ ಪರಸ್ಥಿತಿಯನ್ನು ತಿಳಿಸಿ ಹೇಳಿದನು. ಉಳಿದ ದಳನಾಯಕರೂ ದಳದ ವ್ಯವಸ್ಥೆ ಮಾಡಿಕೊಂಡು ತ್ವರಿತವಾಗಿ ಆ ಭಾಗಕ್ಕೆ ಬಂದರು ತಮ್ಮ ಮೇಲೆ ಸೈನಿಕ ದಾಳಿಯನ್ನು ನಡೆಯಿಸಿದವನು ತಿಮ್ಮನಾಯಕನೆಂಬುದನ್ನು ತಿಳಿದು ಎಲ್ಲರೂ ಸಂತಾಪಗೊಂಡರು. ಅವನು ಕಾಡುಜನರ ಒಂದು ದೊಡ್ಡ ಪಡೆಯೊಡನೆ ಬಂದಿದ್ದನು. ಶರಜರಾಯನು ಯುಕ್ತಿಯಿಂದ, ಅಲ್ಲಿ ಪ್ರತ್ಯಕ್ಷವಾಗಿ ಯುದ್ಧದಲ್ಲಿ ತೊಡಗಿದವರನ್ನು ಬಿಟ್ಟು ಉಳಿದ ಭಟರೊಂದಿಗೆ ವೈರಿಗಳಿಗೆ ತಿಳಿಯದಂತೆ ಪಶ್ಚಿಮಕ್ಕೆ ಸರಿದು ನದಿಯ ತೀರವನ್ನು ಹಿಡಿದು ಹೋಗಿ ವೈರಿಗಳ ಹಿಂಭಾಗದ ಮೇಲೆ ಜೋರಿನಿಂದ ಬಿದ್ದನು ಆಗ ತಿಮ್ಮನಾಯಕನ ಜನರು ಗಾಬರಿಯಾದರು. ಅವರಲ್ಲಿ ಮುಕ್ಕಾಲು ಪಾಲು ಜನರು ಸಹ್ಯಾದ್ರಿಯೊಳಗಿನ ಕಾಡು ಜನರಾಗಿದ್ದರು. ಅವರು ತಂಡ ತಂಡವಾಗಿ ಹಳ್ಳಿಗಳನ್ನು ಸುಲಿಯಲಿಕ್ಕೆ ಮಾತ್ರ ಕುಶಲರು; ಯುದ್ಧವನ್ನೇನು ಬಲ್ಲರು? ತಿಮ್ಮನಾಯಕನು ಸದಾಶಿವನ ಸೂಚನೆಯಂತೆ ಅವರದೊಂದು ಪಡೆಯನ್ನು ರಚಿಸಿದ್ದನು. ಹಣದಾಸೆಗಾಗಿ ಅವರೆಲ್ಲರು ಸೇರಿದ್ದರು. ಕಾಳಗದ ಕೈ ಅರಿಯದ ಅವರು ಹಿಂದು ಮುಂದಿನ ಹೊಡೆತದಲ್ಲಿ ಸಿಕ್ಕು ಘಾಸಿಯಾದರು. ಕೆಲ ಹೊತ್ತಿನಲ್ಲಿಯೆ ಹರಕುಕೋರಿಯ ಆ ಕರಿಯ ಕಾಡುಜನರು ಭಯಂಕರ ಚೀತ್ಕಾರವನ್ನು ಮಾಡುತ್ತ ಕತ್ತಲೆಯಲ್ಲಿ ಹೋಳಾಗಹತ್ತಿದರು. ತಿಮ್ಮನ ಧೈರ್ಯದ ಕಟ್ಟು ಸಡಿಲಾಯಿತು. ಅವನ ಮೂಲ ಸೈನ್ಯದ ಇನ್ನೂರು ಮುನ್ನೂರು ಜನರು ಮಾತ್ರ ತುಸು ಹೆಚ್ಚು ಹೋರಾಡಿದರು. ಅವರಾ

ವರೂ ಹಲವರು ತಮ್ಮ ಅರಸನಿಗೆ ವಿರೋಧವಾಗಿ, ತಮ್ಮ ಸ್ನೇಹಿತರಿಗೆ ಎದುರಾಗಿ ಯುದ್ಧಮಾಡುವದಕ್ಕೆ ನಾಚಿ ಆ ಕತ್ತಲೆಯಲ್ಲಿ ಮರೆಯಾಗತೊಡಗಿದ್ದರು. ರಾತ್ರಿಯ ಕಾಲದಲ್ಲಿ ಅಜಾಗ್ರತವಾಗಿದ್ದ ವೀರಭದ್ರನ ದಂಡಿನ ಮೇಲೆ ಬಿದ್ದು ನಾಶಮಾಡುವದು ಎಷ್ಟು ಸುಲಭ ಸಂಗತಿಯೆಂದು ತಿಮ್ಮ ನಾಯಕನು ತಿಳಿದಿದ್ದನೋ ಪರಿಣಾಮದಲ್ಲಿ ಅಷ್ಟು ಅಸಾಧ್ಯವಾಯಿತು. ಬಹು ಪ್ರಯಾಸಪಟ್ಟು ಕೂಡಿಸಿದ ಜನವೆಲ್ಲ ಯಾವ ಅರ್ಥವನ್ನರಿಯದೆ, ವೈ ಮುರಿಯೆ ಬಡಿಸಿಕೊಂಡು ಅವನನ್ನೇ ನಿಂದಿಸುತ್ತ ನರಳುತ್ತ ಗುಡ್ಡ ಗಾಡನ್ನು ಸೇರಿದರು. ಸದಾಶಿವನಿಗೆ ಹಿತಮಾಡಹೋದುದರ ಫಲವಿದೆಂದು ವೈ ಮೆತ್ತಗಾದ ತಿಮ್ಮನಾಯಕನು ಕತ್ತಲೆಯಲ್ಲಿ ಕುದುರೆಯನ್ನೋಡಿಸುತ್ತ ಹೋಗಿ ಬಿಟ್ಟನು. ಶರಜರಾಯನು ಅವನನ್ನು ಹಿಡಿಯಬೇಕೆಂದು ಸ್ವಲ್ಪ ದೂರ ಬೆನ್ನಟ್ಟಿದರೂ ಕತ್ತಲೆ-ಕಾಡುಗಳು ಹಾಗೆ ಹಿಡಿಯಲು ಅಸಾಧ್ಯ ಮಾಡಿದವು.

ವೈರಿಗಳು ತತ್ತರಿಸಿ ಒಮ್ಮೆಂದೊಮ್ಮೆ ಓಡಿ ಹೋಗಲು ಸೈನಿಕರು ಉತ್ಸಾಹದಿಂದ ಜಯಘೋಷ ಮಾಡಿದರು. ಪಾಳಯವು ಮತ್ತೆ ಮೊದಲಿನಂತೆ ವ್ಯವಸ್ಥೆಗೊಂಡಿತು. 'ಗಸ್ತಿ'ಯ ಕೆಲಸಕ್ಕೆ ಹೆಚ್ಚು ಜನರು ನೇಮಿಸಲ್ಪಟ್ಟರು. ಹೋರಾಟದಲ್ಲಿ ಬಿದ್ದವರ ನಿರೀಕ್ಷಣೆಗೆ ವೈದ್ಯರು ತೊಡಗಿದರು. ಎರಡು ತಾಸುಗಳಲ್ಲಿಯೇ ದಾಳಿಯೂ ಯುದ್ಧವೂ ಯಶಾಪಯಶಗಳ ನಿರ್ಣಯವೂ ಆಗಿ ಹೋದವು. ಭಟನಾಯಕರೆಲ್ಲರು ರಾಜದರ್ಶನಕ್ಕೆ ನಡೆದರು. ಆದರೆ ಅಲ್ಲಿ ಇದೇನು ಭೀಕರನೋಟವು! ಅರಸನು ಗಾಯಪಟ್ಟು ಅಸ್ವಸ್ಥನಾಗಿ ಮಲಗಿದ್ದಾನೆ. ವೇದನೆಗಳಿಂದ ನರಳುತ್ತಿದ್ದಾನೆ. ಶಂಕರನಾರಾಯಣನೂ ಜಗನಾಯಕನೂ ಗಾಯಗಳನ್ನು ತೊಳೆದು ಮದ್ದು ಹಾಕುತ್ತಿದ್ದಾರೆ. ತಾವು ನಿರಾಯಾಸವಾಗಿ ವೈರಿಗಳನ್ನು ಓಡಿಸಿದ್ದರೂ ಅರಸನಿಗೇಕೆ ಈ ಸ್ಥಿತಿಯಾಯಿತೆಂದು ಶರಜರಾಯ ಮೊದಲಾದವರು ಚಿಂತಿಸಿದರು. 'ಏನು ಆದದ್ದು ?'

ರಣಕಹಳೆಯನ್ನು ಕೇಳಿ ಅರಸು ಗೂಡಾರದಿಂದ ಧಾವಿಸಿ ನಡೆದ ದಳನಾಯಕರ ಹಿಂದಿನಿಂದ ಮಂತ್ರಿಯೂ ಅರಸನೂ ನಡೆದಿದ್ದರಷ್ಟೆ ! ಬಾಗಿಲ ದಾಟಿ ಸ್ವಲ್ಪ ಮುಂದೆ ಹೋಗಿರಬೇಕು. ಡೇರೆಯ ಪಡದೆಯಲ್ಲಿ ಅಡಗಿ

ಕೊಂಡಿದ್ದ ಲಠ್ಠ ಕಾಡುಮನುಷ್ಯನು ಹಿಂದಿನಿಂದ ಬಂದವನೇ ವೀರಭದ್ರ ನಾಯಕನ ಟೊಂಕಕ್ಕೆ ಹಾಯ್ದು ನೆಲಕ್ಕೆ ಕೆಡಹಿ, ಎದೆಯ ಮೇಲೆ ಕುಳಿತು, ಕಠಾರಿಯಿಂದ ಇರಿಯಹತ್ತಿದನು. ಅರಸನು ಸಂಕಟಪಟ್ಟು ಚೀರಿದಾಗ ಸ್ವಲ್ಪ ಮುಂದೆ ಹೋಗಿದ್ದ ಶಂಕರನಾರಾಯಣನು ಹೊರಳಿ ನೋಡಿದನು. 'ಅಯ್ಯೋ ಅರಸನನ್ನು ಕೊಲ್ಲುತ್ತಾನೆ ದುಷ್ಟನೊಬ್ಬ' ಎಂದು ಖಡ್ಗವನ್ನೆತ್ತಿ ಎರಡೇ ಹಾರಿಕೆಯಿಂದ ಅಲ್ಲಿಗೆ ಬಂದನು. ಮತ್ತು ಕ್ಷಣಮಾತ್ರದಲ್ಲಿ ಆ ಹಂತಕನನ್ನು ತುಂಡರಿಸುತ್ತಿದ್ದನು. ಆದರೆ ಅದೇ ಕ್ಷಣದಲ್ಲಿ ಡೇರೆಯ ಕಡೆಯಿಂದ ಧಾವಿಸಿ ಬಂದ ಬೇರೊಬ್ಬ ಬಲ್ಲಾಳನ ಖಡ್ಗ ಪ್ರಹರದಿಂದ ಆ ಕಾಡುಮನುಷ್ಯನ ರುಂಡವು ನೆಲಕ್ಕುರುಳಿತು. ಕೂಡಲೆ ಶಂಕರನಾರಾಯಣನು ಆ ದೇಹವನ್ನು ಎಳೆದೊಗೆದನು. ಅಷ್ಟರಲ್ಲಿಯೇ ಅರಸನ ಮೈಯಲ್ಲಿ ದೊಡ್ಡ ಗಾಯಗಳಾದ್ದ ರಿಂದ ಆತನು ಮೇಲಕ್ಕೇಳುವದಕ್ಕೂ ಮಾತಾಡುವದಕ್ಕೂ ಅಸಮರ್ಥನಾಗಿ ದ್ದನು. ಶಂಕರನಾರಾಯಣನು ಈ ಘನಘೋರ ಪ್ರಸಂಗದಿಂದ ಬೆರಗಾಗಿ ಎದುರಿಗೆ ನಿಂತ ವೀರನನ್ನು ದಿಟ್ಟಿಸಿ ನೋಡಿ ಆಶ್ಚರ್ಯಪಟ್ಟು:— "ಜಗನಾ ಯಕರೇ ಏನು ಅಘಟಿತ ಘಟನೆಯಿದು ?" ಎನಲು ಜಗನಾಯಕನು:— "ರಾಜದ್ರೋಹಿಗಳು ಒಡೆಯರನ್ನು ಕಪಟದಿಂದ ಕೊಲ್ಲುತ್ತಿದ್ದರು. ಈಗ ಹಿಡಿಯಿರಿ ಒಳಗೆ ಕರೆದೊಯ್ಯೋಣ" ಎಂದನು. ಇಬ್ಬರೂ ಸಾವಕಾಶವಾಗಿ ಅರಸನನ್ನು ಎತ್ತಿ ಒಳಗೆ ತೆಗೆದುಕೊಂಡು ಹೋಗಿ ಉಪಚರಿಸುತ್ತಿದ್ದರು.

ಶೈತೂರಲ್ಲಿ ಮನಸ್ಸು ತಿರುಗಿ ರಾಜನ ಕ್ಷಮೆಯನ್ನು ಪಡೆದು ಆತನನ್ನು ಕಳುಹಿದ ಬಳಿಕ ಜಗನಾಯಕನು 'ರಾಜನಿಗೆ ಯಾವ ಹಿತ ಮಾಡಿ ಅವನ ಪ್ರೀತಿಯನ್ನು ಸಂಪಾದಿಸಲಿ?' ಎಂದು ಆ ದಿನವೆಲ್ಲ ಚಿಂತಿಸುತ್ತಿದ್ದನು. ಎರಡು ದಿನಗಳ ಹಿಂದೆ, ಮೊದಲು ತಾನೂ ಸೇರಿದ್ದ ಸಂಚಿನ ಕೆಲಸಕ್ಕಾಗಿ ಸದಾ ಶಿವನಾಯಕನ ಕಡೆಗೆಹೋಗಿದ್ದ ಅವನ ಗುಪ್ತ ಸೇವಕನೊಬ್ಬನು ಅದೇ ದಿನ ಸಂಜೆಗೆ ಮರಳಿ ಬಂದನು. ಅವನು ತಂದ ಸುದ್ದಿ ಹೀಗಿತ್ತು: 'ಇಂದೇ ರಾತ್ರಿ ವೀರಭದ್ರನಾಯಕರ ಪಾಳಯವನ್ನು ಮುತ್ತಿ ನಾಶಮಾಡಬೇಕೆಂದು ಸದಾ ಶಿವನಾಯಕರು ತಿಮ್ಮನಾಯಕನಿಗೆ ಆಜ್ಞೆ ಕಳಿಸಿರುವರು. ಮತ್ತು ಮುತ್ತಿ ಗೆಯು ನಡೆದಾಗ ಗುಪ್ತವಾಗಿ ಗೂಡಾರವನ್ನು ಪ್ರವೇಶಿಸಿ ವೀರಭದ್ರನಾಯ ಕರನ್ನು ಕೊಲ್ಲುವದಕ್ಕೆ ಬೇಡರ ಕಾಡುಸಿದ್ಧನನ್ನು ನಿಯಮಿಸಿದ್ದಾರೆ.'

ಸ್ವಾಮಿಹಿತಸಾಧಿಸಲು ತವಕಿಸುತ್ತಿದ್ದ ಜಗನ್ನಾಯಕನಿಗೆ ಇದಕ್ಕಿಂತ ಹೆಚ್ಚಿನ ಸಮಯವಿನ್ನೆಂತಹದು? ಆತನು ಎಣಿಕೆ ಹಾಕುತ್ತ ಕೂಡ್ರಲಿಕ್ಕೆ ಆದೀತೇ? ವೀರಭದ್ರನಾಯಕರ ಪ್ರಾಣರಕ್ಷಣೆಗೆ ಕೂಡಲೆ ಸಿದ್ಧನಾದನು. ಅಷ್ಟರಲ್ಲಿ ಕತ್ತಲಾಗಿತ್ತು. ಬಲವಾದ ಕುದುರೆಗಳ ಮೇಲೆ ಕೇವಲ ಹತ್ತು ಜನ ರೊಡನೆ ಹೊರಟಿದ್ದ ಆತನು ದಾಳಿಯ ಸೂಚನೆಯಾದ ಹೊತ್ತಿಗೇನೇ ಪಾಳ ಯವನ್ನು ಮುಟ್ಟಿದನು. ಗೊಂದಲದಲ್ಲಿ ನುಗ್ಗಿ ಅರಸನ ಡೇರೆಯ ಹತ್ತಿರವೇ ಬಂದನು. ಸುದೈವದಿಂದ ತಕ್ಕ ಸಮಯಕ್ಕೆ ಒದಗಿ ಆ ಕಾಡುಸಿದ್ಧನನ್ನು ಕೊಂದನು.

ಎಲ್ಲ ಗಾಯುಗಳಿಗೆ ಮದ್ದು ಹಾಕಿ ಪಟ್ಟೀಕಟ್ಟಿದ ಬಳಿಕ ಜಗನ್ನಾಯಕನು ಮಂತ್ರಿಗೆ ದಳನಾಯಕರಿಗೆ ನಡೆದುದನ್ನು ವಿವರಿಸಿ ಹೇಳಿದನು. ಆತನು ಮೊದಲು ಸಂಚಿನಲ್ಲಿದ್ದುದರಿಂದಲೇ ಸದಾಶಿವನ ಕೆಲವು ಗುಪ್ತ ಸಂಗತಿಗಳು ಬಯಲಿಗೆ ಬಂದು ಅರಸನ ರಕ್ಷಣೆಯಾಯಿತು. ಅದನ್ನು ಕೇಳಿ ಆ ವೀರ ರೆಲ್ಲರು ಸದಾಶಿವನ ಮೇಲೆ ರೊಚ್ಚಿಗೆದ್ದರು. ಆತನ ಕ್ರಾಂತಿಯ ವಿಷಯದಲ್ಲಿ ಅರಸನು ತಾಳಿದ ಉದಾಸೀನತೆಯನ್ನು ಬಿಡಿಸಬೇಕೆಂದು ನಿಶ್ಚಯಿಸಿದರು. ಹಾಗು ತಮ್ಮ ಸ್ವಪ್ರಭುವಿಗೆ ಬೇಗ ಗುಣವಾಗಲೆಂದು ದೇವರನ್ನು ಬೇಡಿಕೊಳ್ಳ ಹತ್ತಿದರು.

ಹೊರಗೆ ಕತ್ತಲೆಯ ಬಲವು ಕಡಿಮೆಯಾದಂತೆ ಅರಸನ ಗಾಯುಗಳ ವೇದನೆಯೂ ಕಡಿಮೆಯಾಗಿ ಮಾತಾಡತೊಡಗಿದನು. ಸೂರ್ಯನುದಯದ ಸಮಯಕ್ಕೆ ಸಂಪೂರ್ಣವಾಗಿ ಆರಾಮವೆನಿಸಿ ಎದ್ದು ದಿಂಬಿಗೆ ಆತು ಕುಳಿತನು. ಯುದ್ಧವೃತ್ತಾಂತವನ್ನು ಕೇಳಿಕೊಂಡನು. ಜಗನ್ನಾಯಕನನ್ನು ಕೃತಜ್ಞತೆ ಯಿಂದ ಕಣ್ದುಂಬಿ ನೋಡಿದನು. ಸದಾಶಿವನು ಇಷ್ಟೊಂದು ಛಲದಿಂದ ನನ್ನ ನಾಶಕ್ಕೆ ಯತ್ನಿಸುತ್ತಿರುವದರಿಂದ ಬೇಗನೆ ಭದ್ರವಾದ ಕವಲಪುರಕ್ಕೆ ಹೊರಡಬೇಕೆಂದು ಗೊತ್ತು ಮಾಡಿದನು. ದಳಪತಿಗಳಿಗೂ ಅದು ಸರಿಯೆನಿ ಸಿತು. ಸುರಕ್ಷಿತವಾದ ಸ್ಥಳದಲ್ಲಿ ನಿಂತು ಅರಿಗಳನ್ನು ನಾಶಮಾಡಬೇಕೆಂದು ಅವರ ವಿಚಾರ! ಕವಲ (ಕೋಲೀಯ) ಪುರವು ಗುಡ್ಡದ ಮೇಲಿನ ಭದ್ರವೂ ವಿಶಾಲವೂ ಆದ ದುರ್ಗವಾಗಿತ್ತು. ಅವಸರದಿಂದ ಆಹಾರದ ವ್ಯವಸ್ಥೆಮಾಡಿ ಕೊಂಡು ಶಿಬಿರವನ್ನು ಕಿತ್ತು ಪ್ರಯಾಣ ಬೆಳಸಿದರು. ಸಂಜೆಯ ಹೊತ್ತಿಗೆ ಗುಡ್ಡವನ್ನೇರಿ ದುರ್ಗವನ್ನು ಪ್ರವೇಶಿಸಿದರು.

ಕವಲಪುರಕ್ಕೆ ಬಂದು ತಮ್ಮನ್ನು ಕೂಡಬೇಕೆಂದು ಅರಸನು ಕಳಿಸಿದ ಅಪ್ಪಣೆಯು ಇನ್ನೂ ಲಿಂಗರಾಜನಿಗೆ ಮುಟ್ಟಿರಲಿಲ್ಲ. ಅಷ್ಟರಲ್ಲಿ ದ್ರೋಹಿಗಳಾದ ಪುಟ್ಟಣ್ಣ ಹಾಗು ರಾಮ ಹೆಗ್ಗಡೆಯವರು ತಮ್ಮ ತಮ್ಮ ದಳದೊಂದಿಗೆ ಲಿಂಗರಾಜನ ಸೈನ್ಯಶಿಬಿರವನ್ನು ಮುತ್ತಿದರು. ಅರಸನ ಪಾಳಯವನ್ನು ತಿಮ್ಮನಾಯಕನು ಮುತ್ತುವಾಗಲೇ ಅತ್ತ ಲಿಂಗರಾಜನ ಸೈನ್ಯವನ್ನು ಮುತ್ತಿ ನಾಶಮಾಡಲು ಸದಾಶಿವನು ಇವರನ್ನೂ ಕಳಿಸಿದ್ದನು. ಮೊದಲೇ ಸಂತಪ್ತನಾದ ಲಿಂಗರಾಜನು ಹಾಗೆಯೇ ಕ್ರೋಧಾವಿಷ್ಟರಾದ ತನ್ನ ಭಟನಾಯಕರೊಡಗೂಡಿ ಒಂದೇ ಹೊಡೆತದಿಂದ ದ್ರೋಹಿಗಳ ದಳವನ್ನು ದಿಕ್ಕಾಪಾಲಾಗಿ ಓಡಿಸಿ ಬಿಟ್ಟನು. ಕೂಡಲೆ ಇಕ್ಕೇರಿಯನ್ನು ಮುತ್ತಲು ತವಕಿಸುತ್ತಿದ್ದನು. ಆದರೆ ಅಷ್ಟರಲ್ಲಿ ರಾಜಾಜ್ಞೆ ಮುಟ್ಟಿತು. ನಿರ್ವಾಹವಿಲ್ಲದೆ ಕವಲಪುರಕ್ಕೆ ಬಂದನು. ರಾಜನನ್ನು ಕಂಡು ಸಂಚುಗಾರರ ಮೋಸದಿಂದ ತನಗುಂಟಾದ ದುರವಸ್ಥೆಯನ್ನು ಹೇಳಿಕೊಂಡನು.

ಸಪ್ಪಕ್ಷದ ರಾಜಾಧಿಕಾರಿಗಳೆಲ್ಲರು ಒಂದೆಡೆಗೆ ಕೂಡಿದ್ದರಿಂದ ಕ್ರಾಂತಿಕಾರರನ್ನು ನಿಗ್ರಹಿಸುವ ವಿಚಾರವು ಭರದಿಂದ ನಡೆಯಿತು. ಹಿರಿಯತನದ ಹಕ್ಕಿನಿಂದ ವೀರ ಒಡೆಯರು ಪ್ರಯತ್ನ ಪೂರ್ವಕವಾಗಿ ಸಿಂಹಾಸನವನ್ನೇರಿದ್ದರಿಂದ ಅವರನ್ನು ತಳ್ಳುವದಕ್ಕೆ ವೀರಭದ್ರನಾಯಕನಿಗೆ ಮನಸ್ಸಾಗಲಿಲ್ಲ. ಸದಾಶಿವನು ತಮ್ಮೊಡನೆ ದ್ವೇಷವನ್ನು ಮಾಡುತ್ತಿರುವನು ಮಾಡಲಿ, ಆದರೆ ಇವರೆಲ್ಲರ ಆಡಳಿತೆಯಿಂದ ರಾಜ್ಯಕ್ಕಾಗುವ ಕೇಡು ಸ್ಪಷ್ಟವಾಗಿ ಕಾಣುವವರೆಗೆ --ಪ್ರಜೆಗಳೆಲ್ಲರು ಇವರನ್ನು ವಿರೋಧಿಸಿ ಏಳುವ ವರೆಗೆ— ತಾವು ಸುಮ್ಮನಿರಬೇಕೆಂದೇ ವಿರಭದ್ರನಾಯಕನ ಮತವು ! ದ್ರೋಹಿಗಳು ಮತ್ತೆ ತಮ್ಮ ಮೇಲೆ ದಂಡೆತ್ತಿ ಬಂದರೆ, ಇಲ್ಲವೆ ಪರಶತ್ರುಗಳು ರಾಜ್ಯದ ಮೇಲೆ ದಂಡೆತ್ತಿ ಬಂದರೆ ತಾವು ಅದನ್ನು ಎದುರಿಸಬೇಕೆಂಬುದೊಂದು ಆತನ ನಿಶ್ಚಿತವಾದ ನಿಲುವು ! ಅರಸನ ಸಹನೆಯ ನೀತಿಯನ್ನು ಹೇಗಾದರೂ ಎಲ್ಲರೂ ಒಪ್ಪಿಕೊಂಡರು. ಕೈತೂರನ್ನೂ ರಕ್ಷಿಸಿಕೊಂಡಿರಲು ಜಗನಾಯಕನು ಮರಳಿ ನಡೆದನು ಅನಾಥ ಬಾಲೆಯ ಶೋಧಕ್ಕೆ ಶರಜರಾಯ ನಡೆದನು.

—

## ೮. ಅಂತಃಶುದ್ಧಿ

ವೀರಭದ್ರನಾಯಕನ ಪಾಳಯವನ್ನು ಮುತ್ತಿ ಸೋತು, ಪ್ರಾಣರಕ್ಷಣೆಗಾಗಿ ತಾನೊಬ್ಬನೇ ಓಡಿಹೋಗಬೇಕಾಗಿಬಂದ ತಿಮ್ಮನಾಯಕನು ಹತಾಶನಾದನು. ಅವನಿಗೆ ಸದಾಶಿವನ ವಿಷಯದಲ್ಲಿ ಬೇಸರವೂ ಬಂದಿತು. ಅವನ ಮೋಸತಂತ್ರಗಳ ಈ ವರ್ತನವೂ ಅನ್ಯಾಯದ್ದಾಗಿ ತೋರಹತ್ತಿತು. ಆದರೆ ತಿಮ್ಮನಾಯಕನ ಮನಸ್ಸು ವೀರಭದ್ರನಾಯಕನ ಕಡೆಗಾದರೂ ತಿರುಗುವಂತಿರಲಿಲ್ಲ. ಅವನ ಮೇಲೆಯೂ ತನ್ನ ಜೀವನಕ್ಕೇ ಬರೆಕೊಟ್ಟ ಅಸಹ್ಯವಾದ ಆಪಾದನೆ! ಈಗ ಯಾವ ಪಕ್ಷವೂ ಹಿತಕರವಾಗಿ ತೋರಲಿಲ್ಲ. ಕೆಲವು ವೇಳೆ ಸದಾಶಿವನನ್ನು ನಿಂದಿಸುವನು; ಕೆಲವು ವೇಳೆ ತನ್ನ ಗೃಹ ದೋಷವನ್ನು ನೆನಿಸಿ ವೀರಭದ್ರರಾಜನ ಮೇಲೆ ಹಲ್ಲು ಕಡಿಯುವನು. ಈ ಬಗೆಯ ಮಾನಸಿಕ ನೋವಿನ ಮಿಕ್ಕಿದ ಹೊಡೆತದಲ್ಲಿ ತಲೆಕೆಟ್ಟು ಕಟ್ಟಡವಿಯಲ್ಲಿ ಯಾವ ಕಡೆಗೋ ನಡೆದು ಬಿಟ್ಟಿದ್ದನು. ಗುಡ್ಡಗಾಡಿನಲ್ಲಿ ಆತನ ದೊಡ್ಡ ಕುದುರೆಯು ಓಡಲಿಕ್ಕೆ ಅನುಕೂಲವಾದ ಕಡೆಗೆ ಭರದಿಂದ ಓಡುತ್ತಿತ್ತು. ಒಡೆಯನ ಮನೋಗತವನ್ನರಿಯದೆ ಅದು ಒಂದೇ ಸವನೆ ಎರಡು ತಾಸು ಓಡಿ ಅಕಸ್ಮಾತ್ತಾಗಿ ಎದುರಿನಲ್ಲಿ ಬಂದ ಒಂದು ಗುಡಿಸಲಿನ ಮುಂದೆ ನಿಂತು ಬಿಟ್ಟಿತು. ಕುದುರೆ ಒಮ್ಮಿಂದೊಮ್ಮೆ ನಿಂತದ್ದರಿಂದ ಮುಂಜೋಲಿ ಹೋದ ತಿಮ್ಮನಾಯಕನು ಕಣ್ಣು ತೆರೆದು ಸುತ್ತು ಮುತ್ತು ನೋಡಿದನು. ತಾನು ಎಲ್ಲಿಗೆ ಬಂದೆನು ಎಂಬ ವಿಚಾರವು ಆಗ ಹುಟ್ಟಿತು. ಕುದುರೆಯ ಮೇಲೆ ಕುಳಿತೇ ಸುತ್ತಲಿನ ಪ್ರದೇಶವನ್ನು 'ದಿಟ್ಟಿಸಿ' ನೋಡಿದನು. ಎಲ್ಲಿಗೆ ಬಂದೆನೆಂಬುದು ತಿಳಿಯಲೇ ಇಲ್ಲ. ಎಷ್ಟೋ ದೂರದ ಹೊಸ ಸ್ಥಳಕ್ಕೆ ಬಂದಿದ್ದನು.

ಅಲ್ಲಿರುವ ಅಂದ ಚಂದ ಗಿಡಬಳ್ಳಿಗಳೂ, ಬಿಳಿಯ ಹೂಗಳೂ, ಹೂಗೊಂಚಲಗಳೂ, ಲತಾಮಂಟಪಗಳೂ, ಮುಂದಿನ ಶಿಲಾಸನಗಳೂ ನಕ್ಷತ್ರಗಳ ಮಂದ-ಪ್ರಕಾಶದಲ್ಲಿ ಸುಶೋಭಿತವಾಗಿ ತೋರುತ್ತಿದ್ದವು. ಅವುಗಳಾಚೆಗೆ ಮತ್ತೆ ಎತ್ತರವಾದ ವೃಕ್ಷರಾಜಿ! ಕುದುರೆಯ ಮುಂಗಡೆಯ ಗುಡಿಸಲಿನಲ್ಲಿ ಸಣ್ಣ ದೀಪವಿದ್ದಂತೆ ಕಿಂಡಿಗಳೊಳಗಿಂದ ಬೆಳಕು ಕಾಣುತ್ತಿತ್ತು. ದಿಗಿಲುಗೊಂಡ ತಿಮ್ಮನಾಯಕನು "ನೋಡಿದರೆ ಗಹನಾರಣ್ಯ! ಮನುಷ್ಯರ ವಾಸವಿರುವದೇ ಇಲ್ಲಿ? ತಪಸ್ವಿಗಳ ಆಶ್ರಮವಾಗಿರಬಹುದೇನು? ಎನ್ನುತ್ತ ಕುದುರೆಯಿಂದ ಇಳಿದನು. ಕಡಿವಾಣವನ್ನು ಕೈಯ್ಯಲ್ಲಿ ಹಿಡಿದುಕೊಂಡೇ ನಾಲ್ಕು ಹೆಜ್ಜೆ ಮುಂದೆ ಹೋಗಿ ಗುಡಿಸಲಿನ ಸಣ್ಣ ಕಿಂಡಿಯೊಳಗಿಂದ ಒಳಗೆ ಇಣಕಿ ನೋಡಿದನು. ಒಳಗೆ ಇಬ್ಬರು ಮಲಗಿರುವರೆಂಬುದು ತಿಳಿಯಿತು. ಮನದಲ್ಲಿ ಆತನು 'ಇವರು ಸಾಧುಗಳಾಗಿರಬಹುದು, ಯಾರಾದರೂ ಇರಲಿ ನನ್ನ ಬೇಸತ್ತ ಜೀವಕ್ಕೆ ಶಾಂತಿಯನ್ನೀಯುವ, ಇದಕ್ಕಿಂತ ಹೆಚ್ಚಿನ ವಿರಾಮ ಸ್ಥಳವು ಇನ್ನಾವುದು ದೊರೆಯಬೇಕು? ನೋಡಿದರೆ ಒಂದು ಪ್ರಹರಕ್ಕಿಂತ ಕಡಿಮೆ ಉಳಿದಂತಿದೆ ರಾತ್ರಿ! ಇಷ್ಟರಲ್ಲಿ ಸ್ವಲ್ಪ ವಿಶ್ರಾಂತಿಯನ್ನು ಪಡೆದು ಬೆಳಗಾದ ಮೇಲೆ ಹೋದರಾಯಿತು" ಎನ್ನುತ್ತ ಸಮೀಪದ ಒಂದು ಗದ್ದುಗೆಯ ಕಡೆಗೆ ನಡೆದನು. ನೆರೆಯ ಗಿಡಕ್ಕೆ ಕುದುರೆಯನ್ನು ಕಟ್ಟಿ ಮೇಲಿನ ಥಡಿಯನ್ನು ತೆಗೆದು ಮಗ್ಗುಲ ಬುಡಕ್ಕೆ ಹಾಕಿಕೊಂಡು ಸ್ವಲ್ಪ ಅಡ್ಡಾದನು.

ದಣಿದುದರಿಂದ ನಿದ್ರೆ ಬಂದರೂ ಗಾಢ ನಿದ್ರೆಯಲ್ಲ! ಮನಸ್ಸು ವ್ಯಗ್ರವಾಗಿತ್ತು. ಚಿತ್ರ ವಿಚಿತ್ರವಾದ ಕನಸುಗಳನ್ನೇ ಕಾಣುತ್ತಿದ್ದನು. ಕಡೆಗೆ ಒಂದು ಸ್ವಪ್ನ ಹೀಗಿತ್ತು : 'ತಾನೊಂದು ಲತಾ ಮಂಟಪದಲ್ಲಿ ಕುಳಿತಿದ್ದನು. ಭಸ್ಮ ಭೂಷಿತಾಂಗಳೂ, ನಾರಶೀರೆಯ ಧರಿಸಿದವಳೂ ಆದ ಒಬ್ಬ ಯೋಗಿಣಿಯು ಬಂದು ಪವಿತ್ರವಾದ ಹಸ್ತವನ್ನು ತನ್ನ ತಲೆಯ ಮೇಲೆ ಇಟ್ಟು 'ತಮ್ಮಾ ಪಶ್ಚಾತ್ತಾಪ ಪಡುತ್ತಿರುವೆ ನೀನು! ಇನ್ನು ನಿನ್ನ ಅಂತರಂಗ ಶುದ್ಧವಾಗುವದು. ಸತ್ಪುಕ್ಷದ ಸೇವೆ ಮಾಡು, ನಿನಗೆ ಕಲ್ಯಾಣವಾಗುವದು' ಎನಲು ಭಕ್ತಿಯಿಂದ ತಾನು ಆಕೆಯ ಚರಣಗಳ ಮೇಲೆ ಮಸ್ತಕವನ್ನಿಡುತ್ತಿರುವಾಗ ಪಕ್ಕದ ಕೊಳ್ಳದಲ್ಲಿ ರಣಭೇರಿ ಮೊಳಗಿದಂತಾಗಲು' ಎಚ್ಚರ

ವಾಯಿತು. ಎದ್ದು ಕುಳಿತನು. ಮನಸ್ಸು ಜಾಗ್ರತ ಲೋಕಕ್ಕೆ ಮರಳಿತು; ಬೆಳಗಾಗಿದೆ; ಕಣ್ಣುಜ್ಜಿಕೊಂಡು ನೋಡುತ್ತಾನೆ--

ಸುತ್ತಲು ಸೃಷ್ಟಿಯ ಮಹಾಶೋಭೆ! ಪಕ್ಕಗಳಲ್ಲಿ ಮಲೆಯ ಸಾಲು! ಮೇಲೆಲ್ಲ ಗಿಡಗಳ ಹಚ್ಚನೆ ಹಸಿರು ಹಾಸಿಗೆ ಹಾಸಿದೆ! ಮಗ್ಗಲಿನ ಕೊಳ್ಳದ ಆಚೆಗಿರುವ ಬೆಟ್ಟದ ಬದಿಯಲ್ಲಿ ಹಸಿರ ನಡುವೆ ಒಂದು ದೇವಾಲಯದ ಗೋಪುರವು ಕಾಣುತ್ತಲಿದೆ. ಅದೊಂದು ಹಳ್ಳಿ. ಬೆಳಗಿನ ಹೊಗೆ ಮೇಲಾಡುತ್ತಿದೆ. ದೂರವಂಕಿಯ ಸಂದಿನೊಳಗಿಂದ ಸೂರ್ಯನೆದ್ದು ಬರುವಂತಿದೆ. ಆತನ ಹೊಂಬಣ್ಣದ ಕಿರಣಗಳು ಆಗಸದಂಗಣಕೇರಿ ಬರಹತ್ತಿವೆ. ತಿಳಿಗೆಂಪಿನ ಬೆಳಗಿನಲ್ಲಿ ತಪೋವನದ ತರುಲತೆಗಳೆಲ್ಲ ರಂಜಿತವಾಗಿವೆ. ಮೃಗಪಕ್ಷಿಗಳ ಸ್ವಾಭಾವಿಕ ವರ್ತನವು ರಮ್ಯವಾಗಿದೆ, ಗಿಡಬಳ್ಳಿಗಳ ಬುಡಗಳ್ಲಿ— ಆ ಹಸನಾದ ನೆಲದಲ್ಲಿ— ಹೊಸ ಕುಸುಮಗಳು ಸೂಸಿವೆ; ಸುತ್ತಲೂ ಸುವಾಸನೆ ಇಡುಗಿದೆ ತಿಮ್ಮನಾಯಕನು ಕಣ್ಣಾರೆ ಮನವಾರೆ ನೋಡಿದನು. ಬಗೆಯ ನೋವೆಲ್ಲವನ್ನು ಮರೆತನು. ಹತ್ತಿರದ ಗುಡಿಸಲಿನಿಂದ ಹೊರಗೆ ಹೋಗಿದ್ದ ಜಂಗಮ ಮೂರ್ತಿಗಳಿಬ್ಬರು ಹಳ್ಳದ ಕಡೆಯಿಂದ ಬಂದು ಗುಡಿಸಲಲ್ಲಿ ಪಾತ್ರೆಗಳನ್ನಿಟ್ಟು ಭಸ್ಮಭೂಷಿತರಾಗಿ ಅವನ ಮಗ್ಗುಲಲ್ಲಿಯೇ ಹಾದು ಹಿಂಬದಿಗೆ ಹೋದರು. ತಿಮ್ಮನಾಯಕನು ಹೊರಳಿ ನೋಡಿದನು, ಹಿಂದೆ ಚೆಂಗಣಿಗಿಲೆಗಳ ಸಾಲು, ಅದರಾಚೆಯಲ್ಲಿ ಕಲ್ಲುಗೋಡೆಯ ಮೇಲೆ ಚಪ್ಪರ ಹಾಕಿದ ಕುಟೀರವೊಂದು ಕಣಿಗಿಲೆಗಳ ಸಂದಿನೊಳಗಿಂದ ಹಾಯ್ದು ಕಾಣಿಸಿತು. ಮೇಲೆ ಹಬ್ಬಿದ ಹೂಬಳ್ಳಿಗಳು ಹೂವಿನ ಹಚ್ಚಡ ಹೊದಿಸಿದ್ದವು. ನೋಡ ನೋಡುತ್ತ ಸುಪ್ರಸನ್ನವಾದ ಆತನ ಮನಸ್ಸಿನಲ್ಲಿ ಸದ್ಭಾವ-ಭಕ್ತಿಗಳನ್ನು ಬೀರುವ ಮೂರ್ತಿಯೊಂದು ಅದೇ ಸಮಯದಲ್ಲಿ ಆತನ ದೃಷ್ಟಿಗೆ ಬಿದ್ದಿತು, ಕಾವಿಯ ಸೀರೆ, ಮೊಗದಲ್ಲಿ ಭಸ್ಮ ತ್ರಿಪುಂಡ್ರ, ಕೊರಳಲ್ಲಿ ರುದ್ರಾಕ್ಷಿ ಮಾಲೆ, ಪ್ರಸನ್ನ ಮುಖ! ಕುಟೀರದ ಮುಂದಿನ ಛಪ್ಪರದ ಕೆಳಗಿನ ಕಟ್ಟೆಯ ಮೇಲೆ ಕುಳಿತಿದ್ದಳಾ ಆ ಶರಣತಾಯಿ ಜಪಮಾಲೆಯ ಸರಿಸುತ್ತ !!

ಸ್ವಪ್ನದಲ್ಲಿ ದರ್ಶನವಿತ್ತ ತಾಯಿಯೇ ಇವಳೇನೋ ಎಂದು ತಿಮ್ಮನಾಯಕನು ಅಚ್ಚರಿಪಟ್ಟು ನೋಡಿದನು 'ಈ ಆನಂದಮಯ ಮುಖವನ್ನು ನೋಡಿದರೆ ಎಂತಹ ವ್ಯಗ್ರಚಿತ್ತನಾದರೂ ಶಾಂತನಾಗಬಹುದು ! ಎಂತಹ

ದುಷ್ಟನಾದರೂ ಶಿಷ್ಟನಾಗಬಹುದು !! ಏನು ನನ್ನ ಪುಣ್ಯ? ಎಂತಹ ಪವಿತ್ರ ಸ್ಥಳಕ್ಕೆ ಬಂದಿದ್ದೇನೆ ನಾನು?' ಎಂದುಕೊಳ್ಳುತ್ತಿದ್ದನು.

ಕುಟೀರದ ಬಾಗಿಲ ಮುಂದೆ ರಂಗವಲ್ಲಿಯನ್ನು ಇಡುತ್ತಿದ್ದ ಹರೆಯದ ಹೆಣ್ಣು ಮಗಳೊಬ್ಬಳು ಅಕಸ್ಮಾತ್ತಾಗಿ ಹೊರಳಿ ನೋಡಿ ಒಳಗೆ ಹೋದಳು. ಅಲ್ಲಿಗೆ ಬಂದ ಜಂಗಮಮೂರ್ತಿಗಳು ಆ ಶರಣಾಂಬೆಯ ಹತ್ತಿರ ನಮ್ರವಾಗಿ ನಿಂತು ಅಪ್ಪಣೆ ಪಡೆಯುತ್ತಿದ್ದರು. ಇನ್ನು ಹಲವರು ಹಸನ್ಮುಖಿಗಳು ಬಂದು ತಾಯಿಗೆ ವಂದಿಸಿ ತಮ್ಮ ಕೆಲಸಗಳಿಗೆ ತೆರಳುತ್ತಿದ್ದರು. ಇವೆಲ್ಲವನ್ನು ನೋಡಿ ತಿಮ್ಮನಾಯಕನು ತಾನೂ ಆ ಶಿವಯೋಗಿಣಿಯ ಪಾದಕ್ಕೆ ವಂದಿಸಲು ಬಯಸಿ ಎದ್ದನು. ಆದರೆ ರಣಭೂಮಿಯಿಂದ ಓಡಿಬಂದ ತಾನು ಹಾಗೆಯೇ ದರ್ಶನಕ್ಕೆ ಹೋಗುವದೆಂತು ? ಮುಖಮಾರ್ಜನಾದಿಗಳಿಗೆಂದು ಆಶ್ರಮದ ಆಚೆಗಿರುವ ಹಳ್ಳಕ್ಕೆ ಹೋದನು.

ಬಹಳ ದಿವಸಗಳ ಹಿಂದೆ ಈ ಶರಣಮ್ಮನು ಈ ಆಶ್ರಮಸ್ಥಳಾಗಿದ್ದಳು. ಹಲವು ಜನ ಆಧ್ಯಾತ್ಮಿಕ ಸಾಧಕರು ಈ ಗುರುತಾಯಿಯ ಶಿಷ್ಯಪುತ್ರರಾಗಿದ್ದರು. ಆಕೆಯ ಭಕ್ತಿ ಕ್ರಿಯಾ–ಜ್ಞಾನಗಳ ಪ್ರಭಾವವನ್ನು ಕಂಡ ಸುತ್ತಲಿನ ಹಳ್ಳಿಪಳ್ಳಿಗಳ ಜನರೂ, ಅಡವಿಯ ಬೇಡಜನರೂ ಬಹುಭಕ್ತಿಯಿಂದಲೂ ನಿಷ್ಠೆಯಿಂದಲೂ ಆಕೆಯನ್ನು ಕಾಣಹತ್ತಿದರು. ಆಕೆಯ ಉಪದೇಶ ಶ್ರವಣದಿಂದ ಮುಗ್ಧರಾದರು ಅವರೆಲ್ಲರು ಅವಳನ್ನು ಗುರುತಾಯಿಯೆಂದು ಸಂಬೋಧಿಸುತ್ತಿದ್ದರು. ಗುರುತಾಯಿಯ ದರ್ಶನಕ್ಕೆ ಅದೆಷ್ಟೋ ಜನರು ಬರುತ್ತಿದ್ದರು. ಈ ಸತ್ಪ್ರಭಾವದ ಬಲದಿಂದಲೇ ರೂಪಸಂಪನ್ನಳಾದ ಒಬ್ಬ ತರುಣಿಯ ರಕ್ಷಣೆಯು ಅಲ್ಲಿ ಬಾಧೆಯಿಲ್ಲದೆ ನಡೆದಿದ್ದಿತು. ಎಂತಹ ದುಷ್ಟನಿಗೂ ಆಶ್ರಮದಲ್ಲಿ ಬಂದು ಕೀಳು ಮನಸ್ಸು ಮಾಡುವ ಎದೆಯಾಗುತ್ತಿರಲಿಲ್ಲ. ಆಶ್ರಮಸ್ಥರಿಗೆ ಇನ್ನಾವ ಭಯವೂ ಇರಲಿಲ್ಲ. ಸಮೀಪದಲ್ಲಿ ವಾಸವಾಗಿರುವ ಬೇಡರು, ಇವರಿಗೆ ಕ್ರೂರ ಶ್ವಾಪದಗಳ ಭಯವಿಲ್ಲದಂತೆಯೂ ನೋಡಿಕೊಳ್ಳುತ್ತಿದ್ದರು. ಶರಣಾಂಬೆಯ ಆಶ್ರಯದಲ್ಲಿರುವ ತರುಣಿಯೂ ದೊಡ್ಡ ಮನೆತನದವಳು. ಅನಾಥಳಾದ ಆ ಪತಿವ್ರತೆಯು ಕೆಲವು ತಿಂಗಳ ಹಿಂದೆ ಆತ್ಮಹತ್ಯೆಕ್ಕಾಗಿ ಒಂದು ಚಿಕ್ಕ ಪ್ರಪಾತದ ಕೆಳಗಿನ ಮಡುವಿನಲ್ಲಿ ಹಾರಿಕೊಂಡುದು ಸಮೀಪದ ದಾರಿಯಲ್ಲಿ ನಡೆದಿದ್ದ ಗುರುತಾಯಿಯ ಕಣ್ಣಿಗೆ ಅಕಸ್ಮಾತ್ತಾಗಿ ಕಾಣಿಸಿತು;

ಒಡನಿದ್ದ ಶಿಷ್ಯರಲ್ಲಿ ಸಾಹಸಿಯಾದೊಬ್ಬನು ಒಡನೆಯೇ ಮಡುವಿನಲ್ಲಿ ಜಿಗಿದನು; ಅವಳನ್ನು ಮೇಲೆ ತಂದನು. ಅಸುನೀಗಿರಲಿಲ್ಲ. ಆ ಗುರುತಾಯಿ ಉಪಚರಿಸಿ ಆಶ್ರಮಕ್ಕೆ ಕರೆತಂದಿದ್ದಳು. ಅವಳವಸ್ಥೆಯನ್ನು ಕೇಳಿ ಮರುಗಿ ತನ್ನಲ್ಲಿಟ್ಟುಕೊಂಡಿದ್ದಳು. ಚತುರರಾದ ತನ್ನ ಭಕ್ತರನ್ನು ನಿಯೋಜಿಸಿ ಆಕೆಯ ಪತಿಯ ವಿಷಯ, ಹಾಗು ಆತನು ಇವಳಲ್ಲಿ ಸಂದೇಹಗೊಂಡ ರೀತಿ ಮುಂತಾದ ವನ್ನು ಗೊತ್ತು ಹಚ್ಚಿದ್ದಳು. ಸಮಯನೋಡಿ ಅವಳನ್ನು ಪತಿಯೊಡಗೂಡಿಸ ಬೇಕೆಂದು ನಿಶ್ಚಯಿಸಿದ್ದಳು.

ತಿಮ್ಮನಾಯಕನು ಮೊಗದೊಳೆದುಕೊಂಡು ಬಂದು ಆ ಶರಣತಾಯಿಗೆ ಸಾಷ್ಟಾಂಗವಾಗಿ ಎರಗಿದನು. ಆಕೆಯು "ಶುಭವಾಗಲೇಳು; ವತ್ಸಾ, ವ್ಯರ್ಥ ವಾದ ಸಂಶಯವನ್ನು ಬಿಟ್ಟು, ಸತ್ಪಕ್ಷದ ಸೇವೆಮಾಡು, ಧನ್ಯನಾಗುವೆ !" ಎಂದಳು. ತಿಮ್ಮನಾಯಕನು ಎದ್ದು ಕುಳಿತು ಭಕ್ತಿಪರವಶತೆಯಿಂದ ಕೈ ಮುಗಿದು ಎಂದನು:

"ತಾಯಿ, ನಾನು ಯಾರ ಮೇಲೆ ಯಾವ ಸಂಶಯ ತಾಳಿರುವೆನು ? ಯಾವದು ಸತ್ಪಕ್ಷವೆಂದು ಅವರ ಸೇವೆ ಮಾಡಲಿ ? ನನಗೆ ಅದೆಲ್ಲವು ಬೇಡಾ ಗಿದೆ. ನನ್ನನ್ನು ತಮ್ಮ ಸನ್ನಿಧಿಯಲ್ಲಿ ಸೇರಿಸಿಕೊಳ್ಳಿರಿ. ತಮ್ಮ ಉಪದೇಶಾ ಮೃತದಿಂದ ಧನ್ಯನಾಗಬೇಕೆಂದಿದ್ದೇನೆ. ಕೃಪೆಯಾಗಬೇಕು."

"ಉಪದೇಶದ ಮಾತು ಹಾಗಿರಲಿ, ಮೊದಲು ಲೌಕಿಕದಲ್ಲಿ ಹೊಣೆ ಹೊತ್ತ ಮನೆಯ ಮಾತು ಮುಗಿಯಲಿ. ಯಾರ ಮೇಲೆಯೂ ನಿನ್ನ ಯಾವ ಸಂಶಯವೂ ಇಲ್ಲದಿದ್ದರೆ ನಿನ್ನ ಗೃಹಲಕ್ಷ್ಮಿ ಪರಿಶುದ್ಧಳಷ್ಟೇ ? ಅವಳನ್ನು ನೀನು ಸ್ವಿಕರಿಸಬಹುದಲ್ಲವೇ ?"

ಹೀಗೆಂದ ಗುರುತಾಯಿ ಕುತೂಹಲದಿಂದ ಆತನ ಮೊಗವನ್ನು ನೋಡು ತ್ತಿದ್ದಳು. ದೋಷಿಯೆಂದು ತ್ಯಜಿಸಿದ ತನ್ನ ಹೆಂಡತಿಯ ಪರವಾಗಿಯೇ ಈ ಮಾತುಗಳು. ಎಂದು ತಿಮ್ಮನಾಯಕನಿಗೆ ತಿಳಿಯಿತು. ಹಿಂದಿನದೆಲ್ಲವೂ ನೆನಪಾಯಿತು. ತನ್ನ ಹೆಂಡತಿಯ ಪರಿಚಯವು ಇವರಿಗಿದೆಯೆಂದು ಅನಿಸಿತು. ಆದರೆ ಇವರ ಮಾತಿನಂತೆ ಅವಳನ್ನು ಸ್ವೀಕರಿಸಲು ಒಪ್ಪುವದೆಂತು ? ಉತ್ತರ ಕೊಡಲಿಕ್ಕೆ ಬಾರದಂತಾಯಿತು. ಆತನ ಭಾವವನ್ನರಿತು ಶಿವಯೋಗಿನಿಯು ತಾನೇ ಮಾತನಾಡಹತ್ತಿದಳು.

"ವತ್ಸಾ, ತಿಮ್ಮನಾಯಕಾ...."

ತನ್ನ ಹೆಸರು ಕೂಡ ಇವರಿಗೆ ಹೇಗೆ ಗೊತ್ತು ? ಎಂದು ಅಚ್ಚರಿಯಿಂದ ಅವರ ಮೊಗ ನೋಡಿದನು. ಆ ಭಾವವು ಶರಣಮ್ಮನವರಿಗೆ ತಿಳಿಯಿತು.

"ತಿಮ್ಮನಾಯಕ, ನಿನ್ನನ್ನು ಬಲ್ಲೆನು; ನಿನ್ನ ಹೆಂಡತಿಯನ್ನೂ ಬಲ್ಲೆನು. ನಿನ್ನ ಹೆಂಡತಿಯು ನಿರ್ದೋಷಿಯೆಂಬುದನ್ನು ನೀನು ಮನಗಂಡರೆ, ಅವಳನ್ನು ನೀನು ಸ್ವೀಕರಿಸಲಿಕ್ಕೆ ಅಡ್ಡಿಯೇನು ?"

"ಆ ಮೇಲೆ ತಮ್ಮ ಅಪ್ಪಣೆಯು ಶಿರೋಮಾನ್ಯವಾಗಿರುವದು ತಾಯೀ!"

"ಹಾಗಾದರೆ ಕೇಳು! ತಂದೆಯ ಮಂತ್ರಿಪದವು ತನಗೆ ದೊರೆಯಬೇಕೆಂದು ಸದಾಶಿವನು ಬಯಸುತ್ತಿದ್ದನು. ಆದರೆ ವೀರಭದ್ರನಾಯಕನ ಒಳ್ಳೇಯ ಧೋರಣದ ಕಾರಣದಿಂದ ಅದು ಶಂಕರನಾರಾಯಣನಿಗೆ ದೊರೆಯಿತು. ವೀರಭದ್ರನಾಯಕನು ಪಕ್ಷಪಾತವಿಲ್ಲದೆ ಹೀಗೆ ಮಾಡಿದ್ದು ಸರಿಯಾಯಿತಷ್ಟೆ?"

"ಸರಿಯಾದದ್ದು, ಶಂಕರನಾರಾಯಣನು ಕುಶಲನಿದ್ದಾನೆ. ಸದಾಶಿವನ ಬಗೆಗೆ ಪ್ರಜೆಗಳ ಆದರವೇ ಇರಲಿಲ್ಲ."

"ಸರಿ ಮುಂದೆ ಸದಾಶಿವನು ಇದರಿಂದ ತನ್ನ ಮಾನಹಾನಿಯಾಯಿತೆಂದು ವೀರಭದ್ರನಲ್ಲಿ ದ್ವೇಷವನ್ನು ತಾಳಿದನು. ಹಾಗು ಅವನನ್ನು ಪಟ್ಟದಿಂದ ತಳ್ಳಿ, ವೀರಒಡೆಯನನ್ನು ಪಟ್ಟಕ್ಕೆ ಕೂಡ್ರಿಸಿ, ಆಡಳಿತವನ್ನು ತನ್ನ ಕೈವಶ ಮಾಡಿಕೊಳ್ಳಬೇಕೆಂದು ನಿಶ್ಚಯಿಸಿದನು. ಇದರಲ್ಲಿ ಪುಟ್ಟಣ್ಣ ಅವನಿಗೆ ಸಹಾಯಕನಾದನು. ಪ್ರತಾಪಶಾಲಿಯೂ ಜನಪ್ರಿಯನೂ ಆದ ವೀರಭದ್ರನಾಯಕನನ್ನು ನಾಶಮಾಡುವದು ಸುಲಭವಲ್ಲೆಂದು ಈ ಕುಟಿಲಗಾರರು ಮೊದಲು ದಳಪತಿಗಳನ್ನು ತಮ್ಮ ಕಡೆಗೆ ಒಡೆದುಕೊಳ್ಳಬೇಕೆಂದು ಯತ್ನ ನಡೆಸಿದರು. ದಳನಾಯಕರಲ್ಲಿ ನೀನು ಸಾಹಸಿಯೂ ಶೂರನೂ ಆಗಿರುವೆ. ಇದನ್ನು ಅವರು ಅರಿಯದಿರಲಿಲ್ಲ. ವೀರಭದ್ರರಾಜನ ಅಜ್ಜನು ನಿಮ್ಮ ತಂದೆಯನ್ನು ಶಿಕ್ಷಿಸಿದ್ದನೆಂದು ನೀನು ಮೊದಲೇ ರಾಜಮನೆತನದ ಬಗೆಗೆ ಅಸಂತುಷ್ಟನಾಗಿರುವದು ಅವರಿಗೆ ಅನುಕೂಲವೇ ಆಗಿತ್ತು. 'ಗಾಯದಲ್ಲಿ ಬರೆ'ಯೆಂಬಂತೆ ನೀನು ವೀರಭದ್ರನಾಯಕರಲ್ಲಿ ಮತ್ತಿಷ್ಟು ದ್ವೇಷ ತಾಳುವಂತೆ ಹಾಗು

ಕ್ರೋಧಸಂತಪ್ತನಾಗುವಂತೆ ಒಂದು ಕಪಟ ತಂತ್ರವನ್ನು ರಚಿಸಿ ಪ್ರಯೋಗಿಸಿದರು. ಆ ಮೂಲಕ ನಿನ್ನನ್ನು ತಮ್ಮ ಪಕ್ಷಕ್ಕೆ ಎಳೆದುಕೊಂಡು ತಮ್ಮ ಬಲ ಬೆಳೆಸಿಕೊಂಡರು..."

"ಅಮ್ಮನವರೆ, ಅದು ಹೇಗೆ ? ಮನವರಿಯದೆ ಅಂಥನಾಗಿ ನಾನು ಏನನ್ನೂ ಮಾಡಿಲ್ಲವೆಂದು ತಿಳಿಯುತ್ತೇನೆ."

"ಅದನ್ನೇ ಹೇಳುವೆನು ಕೇಳು. ಸದಾಶಿವನು ತಂತ್ರದಿಂದ ನಿನ್ನನ್ನು ಒಡಕೊಳ್ಳುವ ಕೆಲಸಕ್ಕೆ ಪುಟ್ಟಣ್ಣನನ್ನೇ ನಿಯಮಿಸಿದನು. ಪಾಪಕ್ಕೂ ನಿಂದೆಗೂ ಹೇಸದ ಆ ದುಷ್ಟ ಪುಟ್ಟಣ್ಣನು ನಿನ್ನ ಜೀವನದಲ್ಲಿಯೇ ಹುಳಿ ಹಿಂಡುವ ಅತಿ ನೀಚ ಮಾರ್ಗವನ್ನವಲಂಬಿಸಿ ತನ್ನ ಕಾರ್ಯ ಸಾಧಿಸಿದನು. ನೀನು ಒಮ್ಮೆ ಲಿಂಗರಾಜನ ಕೂಡ ಮೈಸೂರ ಒಡೆಯರ ಸಂಗಡ ನಡೆದ ಯುದ್ಧಕ್ಕೆ ಹೋಗಿದ್ದೆಯಷ್ಟೆ ? ತಿರುಗಿ ಬಂದ ಮೇಲೆ ಪುಟ್ಟಣ್ಣನು ನಿನ್ನ ಭೆಟ್ಟಿಗೆ ಬಂದನು. ನೀವಿಬ್ಬರು ಗೆಳೆಯರು; ನಿಮ್ಮಿಬ್ಬರ ಮನೆಗಳು ನೆರೆ ನೆರೆಯಲ್ಲಿ ! ಆಗ ಆತನು ಮಾತನಾಡುತ್ತಾಡುತ್ತ "ನೀವು ಊರಿಗೆ ಹೋದಾಗ ವೀರಭದ್ರನಾಯಕರೇನೋ ನಿಮ್ಮ ಮನೆಯ ಕಡೆಗೆ ಬಂದಿದ್ದರೆಂಬಂತೆ ಕಾಣುತ್ತದೆ." ಎಂದು ನುಡಿದನು. ನೀನು ಸಂಶಯಿತನಾಗಿ 'ಅವೇಕೆ ಬಂದಿದ್ದರು ?' ಎಂದು ಪ್ರಶ್ನೆ ಮಾಡಿದೆ. ಅದಕ್ಕೆ ಅವನು 'ಅದೇನೋ ನನಗೇನು ಗೊತ್ತು ? ಎರಡು ಗಳಿಗೆ ರಾತ್ರಿಯ ಹೊತ್ತಿಗೆ ಅವರು ನಿಮ್ಮ ಮನೆಯಿಂದ ಹೋದುದನ್ನು ನಾನು ಕಣ್ಣುಟ್ಟ ನೋಡಿದೆನು ಮಾತ್ರ !' ಎಂದನು. ಆ ಮಾತು ನಿನ್ನ ಹೃದಯವನ್ನು ನಾದುವಂತಾಯಿತು. ಚಲುವೆಯಾದ ಹೆಂಡತಿ ಇದ್ದರೆ ಗಂಡನಿಗೆ ಇಲ್ಲದ ವಿಕಲ್ಪ ! ನಿನ್ನ ಹೆಂಡತಿಯು ರೂಪವತಿಯು ! ಸೂಕ್ಷ್ಮವಾದುದೊಂದು ಸಂಶಯ ಪಿಶಾಚಿಯು ನಿನ್ನಲ್ಲಿ ಸೇರಿತು. ಮುಂದೆ ಸ್ವಲ್ಪ ದಿನಗಳಲ್ಲಿಯೇ ನೀನು ಅರಸನಪ್ಪಣೆಯಿಂದ ಮೈಪಿಲೇಯರ ಬಂಡನ್ನು ಮುರಿಯಲು ಮತ್ತೆ ಹೋದೆ. ಬಂದ ಮೇಲೆ ಆ ನೀಚ ಪುಟ್ಟಣ್ಣನು ಮತ್ತೆ ನಿನ್ನ ಹತ್ತಿರ ಬಂದನು. ಮಾತಿಗೆ ಮಾತು ತೆಗೆದು ತನ್ನ ಶಾಸ್ತ್ರದ ಕಂತೆಯನ್ನು ಬಿಚ್ಚಿದನು. 'ಸ್ತ್ರೀಯರು ಹಾಗೆ.... ಹೀಗೆ.... ಅವರ ನೆಲೆಯೇ ತಿಳಿಯದು. ಮೇಲೆ ಮೇಲೆ ಗಂಡನಲ್ಲಿ ಬಲು ಪ್ರೀತಿ! ಅವನಿಗೆ ಬಲು ಅನುಕೂಲ ! ಅಂತರಂಗದಲ್ಲಿ ಮತ್ತೊಬ್ಬನನ್ನು

ನೆನಿಸುವರು. ಕೆಲವು ಗಂಡರಾದರೂ-ಏನೆನ್ನಬೇಕು-ಹೆಂಡರ ದುರಾಚಾರವನ್ನು ಕಂಡರೂ ಕಣ್ಣುಮುಚ್ಚಿರುತ್ತಾರೆ.' ಮುಂತಾಗಿ ಮಾರ್ಮಿಕ ಮಾತುಗಳನ್ನು ಆಡಿದನು. ನಿನ್ನ ಮನದ ಆಳದಲ್ಲಿ ಮುಳುಗಿದ ಸಂಶಯು ಅವನ ಮಾತುಗಳಿಂದ ಮತ್ತೆ ತೇಲಿತು. ಅಗ ನೀನು ಸುಮ್ಮನಿರಲಿಕ್ಕಾಗಲಿಲ್ಲ; 'ಪುಟ್ಟಣರಾಯು, ಹಿಂದೊಮ್ಮೆ ನೀನು, ವೀರಭದ್ರನಾಯುಕರು ನಮ್ಮ ಮನೆಗೆ ಬಂದಿದ್ದರೆಂದು ಹೇಳಿದ್ದೆ. ಅ ವಿಷಯುದಲ್ಲಿ ನಿನಗೇನು ಗೊತ್ತಿದೆ? ಇದ್ದುದನ್ನು ಹೇಳು. ಅನುಮಾನಿಸುವದು ಸ್ನೇಹಿತನಿಗೆ ಒಳ್ಳೆಯುದಲ್ಲ: ಎಂದು ಕೇಳಿದೆ. ಆತನು 'ನಾಯುಕರೇ, ಅದನ್ನು ಕೇಳಬೇಡಿರಿ. ಅದರಿಂದ ನಿಮ್ಮ ಮನಸ್ಸಿಗೆ ನೋವಾಗುವದು. ಈ ಬಳಿಕ ಏನು ಅನಾಹುತ ನಡೆಯುುವದೋ ಯಾರು ಬಲ್ಲರು? ಹೇಳದಿರುವದೇ ಒಳಿತೆಂದು ನನಗೆ ತೋರುತ್ತದೆ.' ಎಂದು ಚುಚ್ಚಿ ನುಡಿದು ಮೋರೆ ತಿರುವಿದನು. ನಿಜವಷ್ಟೇ?"

"ನಿಜನಿಜ, ಪೂಜ್ಯಳೇ ಮುಂದೆ ಏನಾಯಿತು ಹೇಳಿರಿ. ವೀರಭದ್ರರಾಜರು ಅವರ ಸಾಂಕೇತಿಕ ಸ್ಥಳಕ್ಕೆ ಬಂದುದನ್ನು ನಾನು ಕಣ್ಣುಟ್ಟಿ ನೋಡಿದ್ದೇನೆ."

"ಅಲ್ಲಿಯೇ ಮೋಸ ಹೋಗಿರುವದು ನೀನು! ಅದು ಹೇಗೆಂಬುದನ್ನು ಕೇಳು. ಆಗ ನೀನು 'ಪುಟ್ಟಣ್ಣಾ, ಈಗೇನು ಮನಸ್ಸಿಗೆ ನೋವಾಗದೆ ಹೋಗಿಲ್ಲ, ನೀನು ಹೇಳಲೇ ಬೇಕು.' ಎಂದು ಆಗ್ರಹ ಮಾಡಲು ವೀರಭದ್ರನಾಯುಕರ ಹಾಗು ನಿಮ್ಮ ಹೆಂಡತಿಯು ಸಂಬಂಧವನ್ನು ಕಲ್ಪಿಸಿ ಹೇಳಿಬಿಟ್ಟನು. ಮತ್ತು 'ಈಗೀಗ ವೀರಭದ್ರನಾಯುಕರು ಇತ್ತ ಕಡೆಗೆ ಬರುತ್ತಿರುವದಿಲ್ಲ. ಅವರಿಬ್ಬರು ಅರಮನೆಯು ಹಿಂದಿನ ತೋಟದಲ್ಲಿ ಕೂಡುತ್ತಿರುವರು. ಈ ಸಂಗತಿಯುನ್ನು ಬೇಕಾದರೆ ನಿದರ್ಶನಕ್ಕೆ ತಂದುಕೊಳ್ಳಬೇಕು. ನೀವು ಆಗ್ರಹ ಮಾಡಿದ್ದರಿಂದ ಇದ್ದ ಸಂಗತಿಯುನ್ನು ಇದ್ದಂತೆ ಹೇಳಿಬಿಟ್ಟೆನು. ಕ್ಷಮಿಸಬೇಕು.' ಎಂದುಬಣ್ಣದ ಭಾಲೆಯಿಂದ ನಿನ್ನ ಹೃದಯುವನ್ನು ಇರಿದನು. ನೀನು ಭ್ರಮಿಷ್ಟನಂತಾಗಿ ಅದನ್ನು ಕಂಡು ಹಿಡಿಯುುವ ಹಂಚಿಕೆ ಯಾವದು? ಎಂದು ಆತನನ್ನೇ ಕೇಳಿದೆ. ತನ್ನ ಕಪಟ ನಾಟಕ ನಾಟುವದೆಂದು ತಿಳಿದು ಆತನು 'ಹಾಗಾದರೆ ಹೀಗೆ ಮಾಡಿರಿ, ಮೂರುನಾಲ್ಕು ದಿವಸದ ಯಾವದೊಂದು ಕೆಲಸದ ನೆವವನ್ನು ಹೇಳಿ, ಊರಬಿಟ್ಟು ಹೋದವರಂತೆ ಮಾಡಿ, ನನ್ನ

ಮನೆಯಲ್ಲಿ ಗುಪ್ತವಾಗಿರ್ರಿ. ಅವರಿಬ್ಬರು ದಾಸಿಯರ ಮುಖಾಂತರ ತಮ್ಮ ಕ್ರೀಡಾ ಸ್ಥಳಕ್ಕೆ ಬರುವದನ್ನು ಗೊತ್ತು ಮಾಡಿಕೊಳ್ಳುವರು. ಅದನ್ನು ನಾನು ತಿಳಿದುಕೊಂಡು ನಿಮಗೆ ತಿಳಿಸುವೆನು ಬಳಿಕ ನೀವು ನಿಮ್ಮ ಹೆಂಡತಿಯ ವೇಷವನ್ನೇ ಹಾಕಿಕೊಂಡು ರಾತ್ರಿ ಬೆಳದಿಂಗಳಲ್ಲಿ ತೋಟವನ್ನು ಪ್ರವೇಶಿಸಿ, ಆ ಲತಾಮಂಟಪದಲ್ಲಿ ಕುಳಿತುಕೊಳ್ಳಿರಿ. ಅಲ್ಲಿ ವೀರಭದ್ರ ನಾಯಕನು ಬರುವನು, ಮುಂದೇನಾಗುವದೋ ನೋಡಿಕೊಳ್ಳಿರಿ ಇತ್ತ ನಿಮ್ಮ ಹೆಂಡತಿಯು ಮನೆ ಬಿಟ್ಟು ಹೋಗದಂತೆ ನಾನು ಕಾವಲು ಮಾಡುತ್ತೇನೆ' ಎಂದು ಹೇಳಿದನು. ನಿಜವಷ್ಟೇ ? ”

“ನಿಜವು ನಿಜವು ! ಹೂ ಮುಂದೆ ಹೇಳಿರಿ ! ”

ತಿಮ್ಮನಾಯಕನ ಎದೆ ಅವಸರದಿಂದ ಬಡಿದುಕೊಳ್ಳುತ್ತಿತ್ತು. ಮುಖ ಬೆವೆತಿತ್ತು! “ಅದರಂತೆ ನೀನು ಎಲ್ಲ ವ್ಯವಸ್ಥೆ ಮಾಡಿಕೊಂಡೆ. ಊರಿಗೆ ಹೋಗುವೆನೆಂದು ಹೇಳಿ ಬಂದು ಪುಟ್ಟಣ್ಣನ ಮನೆಯಲ್ಲಿ ಕುಳಿತುಕೊಂಡೆ. ಆ ನೀಚನು ಒಂದು ದಿನ ‘ಇಂದು ಅವರು ಸಂಕೇತ ಸ್ಥಳಕ್ಕೆ ಬರತಕ್ಕವರಿದ್ದಾರೆ' ಎಂದು ಹೇಳಿ ನಿನಗೆ ಸ್ತ್ರೀ ವೇಷವನ್ನು ಹಾಕಿ ಕಳಿಸಿಕೊಟ್ಟನು. ನೀನು ಖಡ್ಗವನ್ನು ಗುಪ್ತವಾಗಿಟ್ಟುಕೊಂಡು ಸೂಚಿತ ಸ್ಥಳದಲ್ಲಿ ಹೋಗಿ ಕುಳಿತುಕೊಂಡೆ. ಪುಟ್ಟಣ್ಣನು ಮೊದಲೇ ಲಂಚಕೊಟ್ಟು ಅಗಸನಿಂದ ಅರಸನ ಸಾದಾ ಉಡಿಗೆತೊಡಿಗೆಗಳನ್ನು ತಂದಿಟ್ಟುಕೊಂಡಿದ್ದನು. ಅರಮನೆಯ ದಾಸಿಯರಿಬ್ಬರನ್ನು ಆಮಿಷಕ್ಕೊಳಪಡಿಸಿ ತನ್ನ ಕಡೆಗೆ ಮಾಡಿಕೊಂಡಿದ್ದನು. ನೀನು ಹೋದ ಅರ್ಧ ತಾಸಿನ ಮೇಲೆ ಆತನು ಅರಸನ ವೇಷವನ್ನು ಧರಿಸಿ, ಮೇಲೆ ಬೆಲೆಯುಳ್ಳ ಮುತ್ತುರತ್ನಾದಿಗಳ ಆಭರಣಗಳನ್ನು ಹಾಕಿಕೊಂಡು ಒಬ್ಬ ದಾಸಿಯೊಂದಿಗೆ ಕ್ರೀಡಾಮಂದಿರದ ವರೆಗೆ ಬಂದನು. ನೀನು ವೀರಭದ್ರ ರಾಜನೇ ಬಂದನೆಂದು ಔಡುಗಚ್ಚುತ್ತಿದ್ದೆ! ಅದೇ ವೇಳೆಗೆ ಮತ್ತೊಬ್ಬ ದಾಸಿಯು ಹಿಂದಿನ ದಾರಿಯಿಂದ ಒಳಗೆ ಬಂದು ನಿನ್ನ ಹತ್ತಿರ ಸುಳಿದು, ನಿಟ್ಟಿಸಿ ನೋಡಿ, ಬೆಚ್ಚಿದಂತೆ ಮಾಡಿ, ಮುಂದೆ ಧಾವಿಸಿ ಹೋಗಿ, ಆತನ ಕಿವಿಯಲ್ಲಿ ಏನೋ ಹೇಳಿದಂತೆ ಮಾಡಿದಳು. ಕೂಡಲೆ ಆ ಮೂವರು ಸರಕ್ಕನೆ ತಿರುಗಿ ಅವಸರದಿಂದ ತಿರುಗಿ ಹೋದರು. ಇದನ್ನೆಲ್ಲ ನೋಡಿ ನೀನು ‘ಅರಸನು ದುಷ್ಟತನವನ್ನು ಮಾಡಿದ್ದೇ ನಿಜವು! ಪಾಪಿಯಾದ ಆ ನೀಚಸ್ತ್ರೀಯು ಇವ

ನಿಗ ಅನುಕೂಲಳಾಗಿರುವದೇ ನಿಜವು! ಇದೀಗ ಬಂದವನು ನೃಪಾಧಮ ವೀರಭದ್ರನಾಯಕನೇ ಹೌದು! ಆ ಜಾರಿಣಿಯನ್ನು ಕರೆಯ ಹೋದ ದಾಸಿಯು ಅಲ್ಲಿ ಪುಟ್ಟಣ್ಣನ ಕಾವಲಿನಲ್ಲಿ ಕೈಸಾಗದೆ ಒಬ್ಬಳೇ ಮರಳಿ ಬಂದಳು. ವೇಷಾಂತರ ಮಾಡಿದ ನನ್ನನ್ನು ನೋಡಿ, ಓಡಿಹೋಗಿ ಅರಸನಿಗೆ ಹೇಳಿದಳು. ಆತನು ಗಾಬರಿಯಾಗಿ ಓಡಿಹೋದನು' ಎಂದು ತಿಳಿದು ಬಿಟ್ಟೆ ನೀನು! ಕ್ರೋಧಸಂತಪ್ತನಾಗಿ ಮನೆಗೆ ಬಂದೆ ಅಲ್ಲವೇ?"

ಶಿವಣ್ಣನಾಯಕನ ಸಂದೇಹದೆದೆಯೊಡ್ಡು ಒಡೆದಿತ್ತು. ನೀರು ಇಳಿದಿತ್ತು ಮೈಯಲ್ಲಿ ನಡುಕು ಉಂಟಾಗಿತ್ತು.

"ಹೌದು ಅಮ್ಮಾ ಹೌದು! ಆದುದೆಲ್ಲವೂ ಹೀಗೆಯೇ ಹೌದು! ಆ ಪುಟ್ಟಣ್ಣನ ಹೇಳಿಕೆಯನ್ನು ನಂಬಿದೆನು; ಅವನ ಕಪಟನಾಟಕದಿಂದ ಮೋಸ ಹೋದೆನು. ಅವನು ಹೇಳಿದಂತೆ ಅಂದು ನನ್ನ ಹೆಂಡತಿಯು ಅಲ್ಲಿಗೆ ಹೋಗ ಬಹುದೇ ಎಂಬದನ್ನು ನಾನೇ ನೋಡಲಿಲ್ಲವಲ್ಲ ತಲೆಕೆಟ್ಟ ನನಗೆ ಬುದ್ಧಿಯೆಲ್ಲಿ? ಅಯ್ಯೋ ಸುಶೀಲೆಯಾದ ಲಕ್ಷ್ಮಿಗೆ ಸುಳ್ಳು ದೋಷವನ್ನು ಹಚ್ಚಿದೆನಲ್ಲ! ಸತ್ಪ್ರಭುಗಳು ವೀರಭದ್ರನಾಯಕರು; ಅವರ ದೊಡ್ಡಸ್ತಿಕೆಯೆಷ್ಟು? ಪ್ರಜಾಪಾಲನೆಯೆಂತಹದು? ಸಂಶಯದಿಂದ ಅವರನ್ನು ಕಿಡಿಗಣ್ಣಿನಿಂದ ನೋಡಿದೆನಲ್ಲ! ಶಿವಶಿವಾ, ಅವರನ್ನೂ ಅವರಲ್ಲಿ ನಿಷ್ಠೆಯುಳ್ಳವರನ್ನೂ ಅದೆಷ್ಟೋ ಪಿಡಿಸಿದೆನಲ್ಲ!............"

"ಆ ಮೇಲೆ ನೀನು..........."

"ಅಮ್ಮಾ ಸಾಕು, ನಾನು ಬುದ್ಧಿಗೇಡಿ, ನೀಚರ ಮೋಸದ ಮಾತುಗಳಿಗೆ ಬಲಿಯಾದುದನ್ನು ಈ ವರೆಗೆ ಹೇಳಿದಿರಿ. ಮುಂದಿನ ಕ್ರೂರಕರ್ಮವನ್ನು ನಾನೇ ಅಂಧನಾಗಿ ಆಚರಿಸಿದೆನು.........ಹಾಂ....ಸಂಕಟ....ತಾಯೀ ಏನು ಕಳವಳ! ಸುಶೀಲೆ, ಕೋಮಲೆ ನನ್ನ ಲಕ್ಷ್ಮೀ. ನನ್ನ ಪ್ರೇಮದ ಪುತ್ಥಳಿ;........ನಿನ್ನನ್ನು ಅಡವಿಯಲ್ಲಿ ಬಿಟ್ಟೆನಲ್ಲ! ಘೋರಾರಣ್ಯದಲ್ಲ ಕಮರಿಯ ಆಚೆಯ ನಿನ್ನ ತವರೂರನ್ನು ನಿನಗೆ ಕೈಬೆರಳಿನಿಂದ ತೋರಿಸಿ ಬಿಟ್ಟು ಕುದುರೆಯನ್ನೋಡಿಸಿಕೊಂಡು ಬಂದಾಗ ನೀನು ಏನು ತಿಳಿದುಕೊಂಡಿರಬಹುದು? ( ಮೋರೆ ಕಿವುಚಿ ಸುತ್ತು ನೋಡಿ )ಏನು ಕಲ್ಲೆದೆಯವನಾನು? ನನ್ನಂಥಧಮರುಂಟೇ?........ನೀನು....ನೀನು ನಿರ್ಜನವಾದ ಅರಣ್ಯದಲ್ಲಿ

ಸಂಚರಿಸುವಾಗ, ಕಲ್ಲುಮುಳ್ಳುಗಳನ್ನು ತುಳಿಯುತ್ತಿರುವಾಗ, ಬಿಸಲಿನ ತಾಪದಿಂದ ತಳಮಳಿಸುತ್ತಿರುವಾಗ ನಿರಪರಾಧಿಯೆಂದು ಹಲುಬಲಿಲ್ಲವೇ? ನನ್ನನ್ನು ನಿಂದಿಸಲಿಲ್ಲವೇ ಶಪಿಸಲಿಲ್ಲವೇ? ಲಕ್ಷ್ಮೀ........ಛೀ ದುಷ್ಟ ಸದಾಶಿವಾ ನಿನ್ನ ಕ್ಷುದ್ರ ಸ್ವಾರ್ಥದಾಟವಲ್ಲಿ ಎಷ್ಟು ಮನೆತನಗಳು ಮುರಿಯಬೇಕು? ಎಷ್ಟು ನಿರಪರಾಧಿಗಳ ಬಲಿಯಾಗಬೇಕು?....ನೀಚ ಪುಟ್ಟಣ್ಣಾ, ಶಗಣಿಗೆ ಬಾಯ್ದೆಗೆದು ಹೇಸಿ ಕೆಲಸಮಾಡುವ ನೀನು ಪತಿವ್ರತೆಯ ಶಾಪದ ಬೇಗೆಯಲ್ಲಿ ನಾಶವಾಗದೆ ಉಳಿಯುವೆಯಾ?........ಅಕಟ ನನ್ನ ಪತ್ನಿ ಕ್ರೂರ ಪ್ರಾಣಿಗಳ ಬಾಯ್ಗೆ ತುತ್ತಾದಳು, ಅಥವಾ ಹಾದಿಹೋಕರ ಕೈಗೆ ಸಿಕ್ಕು ಆತ್ಮಹತ್ಯ ಮಾಡಿಕೊಂಡಳು.........ಇಲ್ಲ, ಇಲ್ಲ, ದೈವವು ಆ ನಿರ್ಮಲೆಯನ್ನು ರಕ್ಷಿಸಿದೆ. ಅಮ್ಮಾ, ಹೇಳಿರಿ, ನೀವು ಜ್ಞಾನಿಗಳು, ಎಲ್ಲವನ್ನು ಬಲ್ಲವರು; ನೀವವಳನ್ನು ಕಂಡಿದ್ದೀರಿ. ತಾಯೀ (ಕೈಮುಗಿದು) ಆ ನನ್ನ ಲಕ್ಷ್ಮಿಯೆಲ್ಲಿ ಹೇಳಿರಿ. ಈಗಲೇ ಅಲ್ಲಿಗೆ ಹೋಗಿ ಅವಳ ಕ್ಷಮೆಯನ್ನು ಕೋರುವೆನು. ಅವಳೊಡನೆ ನಿಮ್ಮ ಆಶೀರ್ವಾದಕ್ಕೆ ಬರುವೆನು. ಆಕೆ ದಯಾಳು, ನನ್ನನ್ನು ಕ್ಷಮಿಸುವಳು. ಎಲ್ಲಿ ರುವಳು ಹೇಳಿರಿ ತಾಯೀ!"

"ವತ್ಸ ನೀನು ಕಾತರನಾಗಬೇಡ, ನಿನ್ನ ಪಶ್ಚಾತ್ತಾಪದ ಪರಿತಾಪದಿಂದ ತನ್ನ ಹೃದಯ ಕರಗಿದರೆ ನಿನ್ನ ಲಕ್ಷ್ಮಿಯು ಎಲ್ಲಿದ್ದರೂ ಬಂದುಬಿಡಬಹುದು!"

ತಾಯಿಯ ಭಾವವನ್ನು ತಿಳಿದು ಗುಡಿಸಲಿನೊಳಗಿನ ಆ ತರುಣಿಯು, ದುಃಖ, ಆನಂದ, ಪ್ರೇಮ, ಆತುರ ಇವುಗಳ ಹೇಳಲಾಗದ ಉದ್ವೇಗದಿಂದ ಅಶ್ರುಗಳನ್ನು ಸುರಿಸುತ್ತ, ತವಕದಿಂದ ಹೊರಗೆ ಬಂದು ಗುರುತಾಯಿಯ ಪಾದಕ್ಕೆರಗಿದಳು. ಹಾಗು ಕಣ್ಣೀರುಗಳಿಂದ ಆ ಚರಣಗಳಿಗೆ ಅಭಿಷೇಕವನ್ನು ಮಾಡಿದಳು. ಗುರುತಾಯಿ ಆಕೆಯ ತಲೆಯ ಮೇಲೆ ಕೈಯಿಟ್ಟು–

"ಮಗು ಏಳಮ್ಮಾ ಪಶ್ಚಾತ್ತಾಪದಿಂದ ಬೆಂದು ನಿನ್ನ ಪತಿಯ ಹೃದಯ ಹಸನಾಗಿದೆ. ಅಲ್ಲಿ ನಿನಗೆ ಸ್ಥಾನವಿದೆ. ಹೋಗು ಆತನನ್ನು ಆದರಿಸು."

ಲಕ್ಷ್ಮಿಯು ಎದ್ದು ಗದ್ಗದಿತ ಕಂಠದಿಂದ ನಯವಾಗಿ ನುಡಿದಳು :

"ಈ ಪವಿತ್ರ ಪಾದಗಳ ಮಹಿಮೆಯಿಂದಲೇ ಈ ಘನವಾದ ಪಾದ ಗಳನ್ನು ಕಂಡೆನು"

ಎನ್ನುತ್ತ ಹೊರಳಿ ಪತಿಯ ಪಾದದ ಮೇಲೆ ತಲೆಯನ್ನಿಟ್ಟಳು. ತಿಮ್ಮನಾಯಕನು ಆನಂದದಿಂದ ಹುಚ್ಚನಾದನು. ತುಂಬಿ ಬರುವ ನೀರಿನಿಂದ ಉಬ್ಬಿದ ಕಣ್ಣುಗಳಿಂದ ಮೇಲೆ ಕೆಳಗೆ ನೋಡುತ್ತ 'ಏನು ಇವಳೇ ನನ್ನ ಪತ್ನಿಯೇ? ಇವಳು ನನ್ನ ಲಕ್ಷ್ಮಿಯೇ? ನಿಷ್ಕರುಣನಾದ ನನ್ನನ್ನು ಕಾಣಬಂದ ನನ್ನ ಲಕ್ಷ್ಮಿಯೇ? ಎಲ್ಲಿ ನಿನ್ನ ಆ ಚಂದ್ರಮುಖವು? ಎಲ್ಲಿ, ತೋರಿಸು ತೋರಿಸು; ನೋಡಿ ನೋಡಿ ನೀನೇ ನನ್ನ ಪ್ರಿಯಳೆಂಬುದನ್ನು ಮನದಟ್ಟು ಮಾಡಿಕೊಳ್ಳುತ್ತೇನೆ' ಎಂದು ಎರಡೂ ಕೈಗಳಿಂದ ಅವಳ ಮುಖವನ್ನೆತ್ತಿ, ಸಜಲನಯನದಿಂದ ತನ್ನನ್ನೇ ನೋಡುವ ಆ ಮುಖವನ್ನು ನೋಡುತ್ತ "ಅಹುದು ಇವಳೇ ನನ್ನ ಪ್ರಿಯಳು! ಇವಳೇ ನನ್ನ ಲಕ್ಷ್ಮಿಯು! ಲಕ್ಷ್ಮೀ ನನ್ನನ್ನು ಕ್ಷಮಿಸು; ಕ್ಷಮಿಸುವಿಯಾ ಲಕ್ಷ್ಮೀ? ಮೊದಲಿನಂತೆಯೇ ನನ್ನನ್ನು ಆದರಿಸುವೆಯಾ?........"

ತಿಮ್ಮನಾಯಕನ ಆವೇಶ ಪರವಶತೆಯಲ್ಲಿಯ ಈ ಮಿಲನವು ಆಶ್ರಮವಾಸಿಗಳೆಲ್ಲರ ಗಮನವನ್ನು ಸೆಳೆಯಿತು. ಕಸಗೂಡಿಸುವವರು, ಹೂಗಿಡಗಳಿಗೆ ನೀರೆರೆವವರು, ಹಳ್ಳದ ಕಡೆಗೆ ಹೋದವರು, ಪತ್ರಿ ಪುಷ್ಪಗಳನ್ನೆತ್ತುವವರು, ಗೋಶಾಲೆಯ ಬಾಲಕರು ಮುಂತಾಗಿ ಎಲ್ಲರೂ ಓಡಿಬಂದು ಸಾಲಾಗಿ ನಿಂತು ನೋಡುತ್ತಿದ್ದರು ಆ ಅಪೂರ್ವಯೋಗವನ್ನು!! ಇದನ್ನು ನೋಡುತ್ತಿದ್ದ ಆ ಗುರುತಾಯಿಗಾದ ಆನಂದಕ್ಕೆ ಅಳತೆಯೇ? ನಸುನಗೆಯ ಮೊಗದ ತೇವಾದ ಕಣ್ಣುಗಳಿಂದ ಏಕಚಿತ್ತವಾಗಿ ನೋಡುತ್ತಿದ್ದಳು. ಆಕೆಯ ಕರುಣೆಯ ಕಿರಣಗಳು ತೂರಿ ಬರುವಂತೆ ಇದ್ದ ಆ ಕಣ್ಕಾಂತಿಯು ಆ ದಂಪತಿಗಳ ಹೃದಯಕ್ಕೆ ಬೆಳಕನೀಯುತ್ತಿದ್ದಿತು.

ಇತ್ತ ಲಕ್ಷ್ಮಿಯು ಪತಿಗೆ ಉತ್ತರವಾಗಿ—'ಸ್ವಾಮೀ ನನ್ನ ಅದೃಷ್ಟಕ್ಕೆ ತಾವೇನು ಮಾಡುವಿರಿ? ಪೂರ್ವಜನ್ಮದಲ್ಲಿ ಯಾವ ಪತಿವ್ರತೆಯನ್ನು ದೂಷಿಸಿದ್ದೆನೋ, ಅದರ ಫಲವಾಗಿ ಈ ಜನ್ಮದಲ್ಲಿ ನನ್ನ ಮೇಲೆ ದೋಷಾರೋಪವಾಯಿತು. ಆದರೂ ಮಾತೆಯವರ ಕರುಣೆಯ ಕೈ ನನ್ನನ್ನು ಕಾಪಾಡಿತು. ನಾನು ಈ ಪಾದಗಳನ್ನು ಕಂಡುದು, ನೀವು ನನ್ನನ್ನು ನಿರ್ದೋಷಿಯೆಂದು ಕಂಡುದೂ ಅವರ ಕೃಪೆಯಿಂದಲೇ! ಅವರ ಪಾದಸೇವೆ, ಅವರ ಉಪದೇಶ ಶ್ರವಣ ಇವೇ ನಮ್ಮ ಎಂದಿನ ಪಾಪವನ್ನಾದರೂ ಪರಿಹರಿಸಬಲ್ಲವು!' ಎಂದು ಹೇಳುತ್ತ ತಲೆ ತಗ್ಗಿಸಿ ಕಣ್ಣೊರಸಿಕೊಳ್ಳುತ್ತಿದ್ದಳು.

ಗುರುತಾಯಿಯು ನೆರೆದವರೆಲ್ಲರಿಗೆ ಒಂದು ಗಳಿಗೆ ಕೂಡ್ರಹೇಳಿದಳು. ಬಳಿಕ ತಿಮ್ಮನಾಯಕನನ್ನು ಕುರಿತು—ತನಗೆ ಲಕ್ಷ್ಮಿಯು ದೊರೆತುದನ್ನೂ ಅವಳವಸ್ಥೆಗೆ ಕರಳು ಕರಗಿ, ಅವಳ ಮೇಲಿನ ದೋಷಾರೋಪಣೆಯ ನಿಜಾಂಶ ವನ್ನು ಶೋಧಿಸಿದುದನ್ನೂ ವಿವರಿಸಿದಳು. 'ನಿನ್ನನ್ನು ಕಾಣುವ ಬಗೆ ಹೇಗೆನ್ನುತ್ತಿರುವಾಗ, ನಿನ್ನಿನ ರಾತ್ರಿ ದೇವರೇ ನಿನ್ನನ್ನು ಇಲ್ಲಿಗೆ ಬರಮಾಡಿದನು ಆಗಲೆ ಆಶ್ರಮದಂಚಿನಲ್ಲಿ ಕುಳಿತಿದ್ದ ನಿನ್ನನ್ನು ಲಕ್ಷ್ಮಿಯು ನೋಡಿ ಗುರ್ತಿಸಿ ನನಗೆ ತಿಳಿಸಿದಳು. ನಿಮ್ಮಿಬ್ಬರ ಈ ಪುನರ್ಮಿಲನವು ನನ್ನೆದುರಿನಲ್ಲಾದುದಕ್ಕೆ ನನಗೆ ಬಲು ಸಂತೋಷ! ಇದು ಕೊನೆಗೂ ಸುಖಕರವಾಗಿ ಪರಿಣಮಿಸಲಿ! ಇದು ನನ್ನ ಪೂರ್ಣಾಶೀರ್ವಾದವು !”

ದಂಪತಿಗಳು ಭಕ್ತಿ ನಮಿಸಿದರು. ತಿಮ್ಮನಾಯಕನಿಗೆ ಆಗಲೂ ಶಾಂತಿಯಿಲ್ಲ. ಕೈಮುಗಿದು ನಿಂತು ಕೇಳಿದನು :

“ಅಮ್ಮಾ, ಸಪ್ರಭು ವೀರಭದ್ರರಾಜರಿಗೆ ವಿಪತ್ತುಗಳನ್ನು ತಂದೊಡ್ಡಿ ದ್ರೋಹ ಮಾಡಿದುದಕ್ಕೆ ಯಾವ ಪ್ರಾಯಶ್ಚಿತ್ತವನ್ನು ಹೊಂದಲಿ? ನನಗೆ ದಾರಿ ತೋರಿರಿ ”

“ಮಗು ವೀರರಿಗೆ ತಕ್ಕುದನ್ನೇ ಕೇಳಿದೆ! ನೀನು ಸಾಹಸ ಮಾಡಿ ರಾಜನನ್ನು ಒಲಿಸಿಕೊಳ್ಳು. ಆಮೇಲೆ ಆತನ ಹಿತವನ್ನು ಸಾಧಿಸು. ಇನ್ನೂ ಅವನಿಗಾಗಿ ಕಾದಿರುವ ವಿಪತ್ತುಗಳಲ್ಲಿ ನೀನು ಜಾಗ್ರತನಾಗಿದ್ದು ಅವನನ್ನು ರಕ್ಷಿಸು ಬೇರೆ ಪ್ರಾಯಶ್ಚಿತ್ತವೇನೂ ನಿನಗೆ ಬೇಕಾಗಿಲ್ಲ ”

“ಆಗಲಿ ತಾಯೀ, ಅವರ ಸೇವೆಯು ನನ್ನ ಕರ್ತವ್ಯ ! ಅವರ ರಕ್ಷಣೆಗೆ ನನ್ನ ಪ್ರಾಣವು ಮುಡಿಪು ! ಅವರು ಮರಳಿ ಸಿಂಹಾಸನವನ್ನು ಪಡೆಯುವ ವರೆಗೆ ನಾನು ಗೃಹಸೌಖ್ಯವನ್ನು ಅನುಭೋಗಿಸುವದಿಲ್ಲ. ಇದು ನನ್ನ ಪ್ರತಿಜ್ಞೆ, ತಮ್ಮ ಪಾದಸಾಕ್ಷಿಯಾಗಿ !”

“ಆಗಲಿ ವೀರಾ, ವೀರಭದ್ರರ ಪಕ್ಷಕ್ಕೆ ಜಯಸಿಗುವದು ನಿನ್ನ ಬಯಕೆ ಕೈಗೂಡುವದು ಪ್ರತಿಜ್ಞೆ ನೆರವೇರುವದು. ಆದುವರೆಗೆ ಲಕ್ಷ್ಮಿ ನನ್ನ ಬಳಿ ಯಲ್ಲಿರಲಿ; ಸಮ್ಮತಿಯೇ ?”

“ಆಗಬಹುದು ತಾಯೀ. ನಾನು ನನ್ನ ಕರ್ತವ್ಯಕ್ಕೆ ನಡೆದೆನು.”

ನಮಸ್ಕರಿಸಿ ಹೊರಡಲನುವಾದನು ತಿಮ್ಮನಾಯಕನು !

"ಅಗಲಿ ನಾನು ವೀರಪತ್ನಿಯೆನಿಸುವಂತಾಗಲಿ. ನಿಮ್ಮ ರಾಜಕಾರ್ಯ ನೆರವೇರಲಿ" ಎನ್ನುತ್ತ ಲಕ್ಷ್ಮಿ ಪತಿಗೆ ವಂದಿಸಿ ಹಿಂದಕ್ಕೆ ಸರಿದಳು.

ಇಂದು ಆಶ್ರಮದಲ್ಲಿದ್ದು ನೀನೂ ನಿನ್ನ ಕುದುರೆಯೂ ವಿಶ್ರಾಂತಿ ಪಡೆದು ನವಚೇತನಮೊಡನೆ ನಾಳೆ ಪ್ರಯಾಣ ಮಾಡಬೇಕೆಂದು ಗುರುತಾಯಿ ಆದೇಶವಿತ್ತಳು. ಅದರಂತೆ ತಿಮ್ಮನಾಯಕನು ಆ ಶಾಂತವಾತಾವರಣದಲ್ಲಿ ಅಂದಿನ ದಿನವನ್ನು ಆರಾಮವಾಗಿ ಕಳೆದು ಮರುದಿನ ತನ್ನ ಕುದುರೆಯನ್ನೇರಿ ಕೈತೂರ ಕಡೆಗೆ ನಡೆದನು.

—

## ೯. ರಾಕ್ಷಸೀ ಮಹತ್ವಾಕಾಂಕ್ಷೆ

ಇಕ್ಕೇರಿಯ ಶೋಭೆಯೂ ಅಡಗಿಹೋಗಿದೆ. ಆಗ ಅರಸನೊಡನೆ ಅದೆಷ್ಟೋ ಜನರು ಹೋಗಿದ್ದರು. ಈಗಲೂ ಸಾತ್ವಿಕರಾದ ಕೆಲವರು ಊರು ಬಿಡಹತ್ತಿದ್ದಾರೆ, ಕವಲಪುರಕ್ಕೆ ನಡೆದಿದ್ದಾರೆ. ಉಳಿದವರಲ್ಲಿಯೂ ಉತ್ಸಾಹವಿಲ್ಲ, ಆನಂದವಿಲ್ಲ. ಎಲ್ಲಿಯೂ ಉತ್ಸವ ವಿನೋದಗಳಿಲ್ಲ. ಉದ್ಯೋಗ ವ್ಯವಸಾಯಗಳು ಕುಗ್ಗಿವೆ. ಜನರು ಹಾಗೂ ಹೀಗೂ ದಿನ ನೂಕುತ್ತಿದ್ದಾರೆ. ಸದಾಶಿವ ಪುಟ್ಟಣರೂ ಅವರ ಅನುಯಾಯಿಗಳೂ ಮಾತ್ರ ಇನ್ನೂ ತೀರ ದಿವ್ಸ ತಮ್ಮ ದುರಾಶೆಗಳನ್ನು ಪೂರೈಸಿಕೊಳ್ಳುವದಕ್ಕಾಗಿ ಉತ್ಸುಕರಾಗಿದ್ದಾರೆ. ವೀರ ಒಡೆಯನು ಪಟ್ಟಾಭಿಷೇಕದ ಮರುದಿನದಿಂದ ಓಲಗವನ್ನೂ ಕಾಣಲೇ ಇಲ್ಲ. ಮತ್ತೆ ಸಿಂಹಾಸನದ ಮೇಲೆ ಕೂಡ್ರಲೇ ಇಲ್ಲ. ಈ ಎರಡು ತಿಂಗಳಲ್ಲಿ ಆತನ ದೇಹಸ್ಥಿತಿ ತೀರ ಕೆಟ್ಟು, ಪರಲೋಕಕ್ಕೆ ಪಯಣ ಮಾಡುವ ಮುಹೂರ್ತವು ಸನ್ನಿಹಿತವಾಗಿತ್ತು: ರಾಜ್ಯಕಾರಭಾರವೆಲ್ಲ ಸದಾಶಿವ ಪುಟ್ಟಣರ ಕೈಯಲ್ಲಿ! ವೀರ ಒಡೆಯರ ಬೇನೆಯ ಕಡೆಗೆ ಅವರ ಲಕ್ಷವೇ ಇಲ್ಲ. ಆತನು ಸತ್ತರೇನು? ಇದ್ದರೇನು? ಎಲ್ಲವೂ ಅಷ್ಟೆ! ತನನ್ನು ಮೊದಲು ದೊಡ್ಡ ದೊಡ್ಡ ಮಾತುಗಳಿಂದ ಮರುಳು ಮಾಡಿ, ಈಗ ಈ ರೀತಿ ಅನಾದರಿಸುವದನ್ನು ಕಂಡ ವೀರ ಒಡೆಯನ ಅಂತ್ಯಕಾಲದ ದುಃಖವು ಇನ್ನಿಷ್ಟು ಹೆಚ್ಚಾಯಿತು. ನಾಳೆ ಸಾಯುವವನು ಇಂದೇ ಸಾಯುವಂತಾದನು.

0 0 0 0

ಎರಡು ತಾಸು ಹೊತ್ತು ಏರಿರಬಹುದು! ಸದಾಶಿವ-ಪುಟ್ಟಣರಿಬ್ಬರೂ ಮಂತ್ರಾಲಯದಲ್ಲಿ ಆಲೋಚನೆಯಲ್ಲಿದ್ದರು.

"ಆ ಹುಡುಗಿಯು ಮೊದಲೇ ತನ್ನ ವೃತ್ತಾಂತವನ್ನು ಹೇಳಿಬಿಟ್ಟಿದ್ದರೆ, ಇಷ್ಟರಲ್ಲಿಯೇ ಈ ಎಲ್ಲ ಕಾರ್ಯಗಳೂ ತೀರಿಹೋಗುತ್ತಿದ್ದವು."

"ಈಗಲಾದರೂ ಹೇಳಿದಳಲ್ಲ !"

"ಅವಳು ತನ್ನ ಅಕ್ಕನು ಸತ್ತುದಕ್ಕಾಗಿ ಬಹಳ ದುಃಖಿಸುತ್ತಿರುವ ಳಂತೆ ! ಬಂಡುಗಾರರಿಂದ ತನ್ನನ್ನು ಬಿಡಿಸಿದ ವೀರಭದ್ರನನ್ನು ಬಹಳವಾಗಿ ಸ್ತುತಿಸುತ್ತಿದ್ದಾಳಂತೆ !"

"ಸ್ತುತಿಸಲಿ; ವೀರಭದ್ರನ ಮೇಲಿನ ಆವಳ ಅನುರಾಗವೇ ಅವನ ಮೃತ್ಯುವಾಗುವಂತೆ ಮಾಡಿದರಾಯಿತು."

"ಈಕೆ ಕೊಲ್ಲೂರು ರುದ್ರೇಶ್ವರನ ಮಗಳಾದರೆ, ನಾವು ವೀರಭದ್ರನಿಗೆ ಹಚ್ಚುವ ದೋಷವನ್ನು ಆತನು ನಂಬಲಿಕ್ಕಿಲ್ಲ. ಯಾಕೆಂದರೆ ವೀರಭದ್ರನಿಗೂ ರುದ್ರೇಶ್ವರನಿಗೂ ಅತಿ ಸ್ನೇಹ ! ಆತನು ತನ್ನ ಮಗಳನ್ನು ಮದುವೆಯಾಗ ಬೇಕೆಂದು ಬಹುದಿವಸಗಳಿಂದ ವೀರಭದ್ರನನ್ನು ಕೇಳುತ್ತಿದ್ದನು. ಹಾಗೆ ಕೊಡಬಯಸಿದ ಹುಡಿಗೆ ಇವಳೇ ಆಗಿರಬಹುದು."

"ನಾವು ರುದ್ರೇಶ್ವರನಿಗೇಕೆ ಈ ಸಂಗತಿಯನ್ನು ತಿಳಿಯಗೊಡಬೇಕು ? ಅವನೂ ಬೀಳಗಿಯ ರಾಜನೂ ತಮ್ಮ ಹೆಣ್ಣುಮಕ್ಕಳನ್ನೂ ಹುಡುಕಿಸಿ, ಹುಡುಕಿಸಿ ಬೇಸತ್ತುಬಿಟ್ಟಿದ್ದಾರೆ. ಈಗ ಬೀಳಗಿಯ ರಾಜನಿಗಷ್ಟೇ ತಿಳಿಸಿ ವೀರಭದ್ರನ ವಿಷಯದಲ್ಲಿ ದ್ವೇಷವುಂಟಾಗುವಂತೆ ಮಾಡಿದರಾಯಿತು."

"ಹಾಗೆ ಮಾಡಲು ಸಾಧ್ಯವಿದೆ."

"ಕೂಸು ನಮ್ಮ ಆಧೀನದಲ್ಲಿ ಬಂದ ಹೊರತು ಬೀಳಗಿ ಪತ್ರವನ್ನು ಕಳುಹಕೂಡದು."

"ಅಹುದು; ತಿರುಮಲನು ಇಷ್ಟರಲ್ಲಿ ಬರಬಹುದು. ಪತ್ರವನ್ನಂತೂ ಬರೆದಾಗಲಿ; ಹೊತ್ತಾಗುತ್ತದೆ. ಅಷ್ಟರಲ್ಲಿ ಕೂಸು ಕೈಸೇರಿದರೆ ಪತ್ರವನ್ನು ಕಳುಹಿದರಾಯಿತು."

"ಹಾಗೆಯೇ ಮಾಡುವದು ಸರಿ."

ಎಂದು ಸದಾಶಿವನು ತಾವು ಹೂಡಿದ ಹೊಸ ತಂತ್ರದಂತೆ ಪತ್ರಬರೆಯ ಹತ್ತಿದನು. ಆಗ ಬಾಗಿಲಕಡೆಗೆ ನೋಡುತ್ತ ಅಡ್ಡಬಿದ್ದಿದ್ದ ಪುಟ್ಟಣ್ಣನು : "ಹಾಂ, ತಿರುಮಲ ಬಂದ ಕಾಣ್ರಿ" ಎಂದು ಎದ್ದು ಕುಳಿತನು. ಸದಾಶಿವನು

ತಿರುಗಿ ನೋಡಿ "ವಾಹವ್ವಾ, ಬಂದೆಯಾ ? ಎಲ್ಲಿ ತೆಗೆ ನಮ್ಮ ವಸ್ತುವನ್ನು ?" ಎಂದು ನಸುನಗುತ್ತ– ನೋಡುತ್ತ– ಇತ್ತ ಪತ್ರವನ್ನು ಬರೆದನು. ಹುಮ್ಮನಾದ ತಿರುಮಲನು ಬಂದು ತುಟಿ ಎರಡು ಮಾಡದೆ ಬುಟ್ಟಿಯೊಳಗಿನ ಹಣ್ಣುಗಳನ್ನು ಹೊರಗೆ ಇಡಹತ್ತಿದನು. ಅವು ತೀರಿದ ಬಳಿಕ ಎರಡೂ ಕೈಗಳನ್ನೂ ಬುಟ್ಟಿಯಲ್ಲಿ ಹಾಕಿ ಒಳಗಿರುವ ಒಂದು ಹೆಣ್ಣು ಕೂಸನ್ನು ಎತ್ತಿ ಅವರ ಮುಂದೆ ಹಾಕಿದನು. "ಭಲೆ ನಮ್ಮ ಕೆಲಸವಾಯಿತು ಬಿಡು." ಎಂದು ಸದಾಶಿವನು ಭುಜ ಚಪ್ಪರಿಸಿಕೊಂಡನು.

0 0 0 0

ಕೊಲ್ಲೂರ ಪಾಳೆಯಗಾರರಾದ ರುದ್ರೇಶ್ವರರಿಗೆ ಇಬ್ಬರು ಹೆಣ್ಣು ಮಕ್ಕಳು ! ಹಿರಿಯ ಮಗಳಾದ ದೇವಕ್ಕನನ್ನು ಬೀಳಗಿಯ ಘಂಟಿಯೊಡೆಯರಿಗೆ ಕೊಟ್ಟಿತ್ತು. ಸಣ್ಣಮಗಳು ಚೆನ್ನಮ್ಮನನ್ನು ಮದುವೆಯಾಗಲು ಇಕ್ಕೇರಿಯ ವೀರಭದ್ರನಾಯಕರಿಗೆ ಆಗ್ರಹ ಮಾಡುತ್ತಿದ್ದರು. ವೀರಭದ್ರನಾಯಕನು ಕಂಡಲೂರ ಚೆನ್ನನಾಯಕರ ಮಗಳನ್ನು ಮದುವೆಯಾಗಿದ್ದನು. ಇಬ್ಬರು ಹೆಂಡಿರನ್ನು ಮಾಡಿಕೊಳ್ಳಲು ಅಷ್ಟು ಮನಸ್ಸಿಲ್ಲ. ಆದ್ದರಿಂದ ಇನ್ನೂ ನಿರ್ಣಯವಾಗಿರಲಿಲ್ಲ. ದೇವಕ್ಕನು ತಂದೆಯ ಮನೆಯಲ್ಲಿ ಈ ಚೊಚ್ಚಿಲ ಕೂಸನ್ನು ಹೆತ್ತಳು. ಬಳಿಕ ತಂಗಿಯನ್ನೂ ಕರೆದುಕೊಂಡು ವೈಭವದಿಂದ ಪತಿಯ ಮನೆಗೆ ಬೀಳಗಿಗೆ ಹೊರಟಾಗ ಬಂಡುಗಾರರಿಂದ ವಿಪತ್ತಿಗೀಡಾಗಿ ಆತ್ಮಹತ್ಯ ಮಾಡಿಕೊಂಡುದೂ, ವೀರಭದ್ರನಾಯಕನು ಬಂಡುಗಾರರಿಂದ ಬಿಡಿಸಿಕೊಂಡು ಬಂದ ಚೆನ್ನಮ್ಮನನ್ನೂ ಶೈತೂರಲ್ಲಿ ತಿಮ್ಮನಾಯಕನು ಅಪಹರಿಸಿಕೊಂಡು ಪಾರಾದುದೂ ಹಿಂದೆ ತಿಳಿದಿದೆ ಆಗ ತಿಮ್ಮನಾಯಕನು ಅವರನ್ನು ತನ್ನ ಬೇಡರ ಪಡೆಯ ಗುಪ್ತಸ್ಥಳದ ಗವಿಯಲ್ಲಿ ಒಯ್ದು ಇಟ್ಟನು. ಮುಂದೇನು ಮಾಡುತ್ತಿದ್ದನೋ ಏನೋ ? ಮರು ಹಗಲಿನಲ್ಲಿ ಸದಾಶಿವನಿಂದ ಅಂದಿನ ರಾತ್ರಿಯೇ ವೀರಭದ್ರನ ಪಾಳಯವನ್ನು ಮುತ್ತಲು ಸೂಚನೆ ಬಂದಿತು. ಆದ್ದರಿಂದ ತಿಮ್ಮನು ಚೆನ್ನಮ್ಮನನ್ನು ಬೇಡರ ಮುತ್ತನ ವಶದಲ್ಲಿರಿಸಿ ಅತ್ತ ಹೋದನು. ಆ ಮುತ್ತಿಗೆಯಲ್ಲಿ ಆತನು ಸೋತು ಅಡವೀ ಸೇರಿದನು. ಅಲ್ಲಿ ಶರಣಮ್ಮನ ದರ್ಶನದಿಂದ ಸತ್ಯವನ್ನರಿತು ಮನಸ್ಸು ತಿರುಗಿದ್ದರಿಂದ ಅವನು ಆ ಗವಿಗೆ ಮರಳಿ ಬರಲೇ ಇಲ್ಲ. ತಿಮ್ಮ

ನಾಯಕನು ಬಾರದಿದ್ದುದನ್ನೂ ಗವಿಯಲ್ಲಿ ಒಬ್ಬ ನವಬಾಲಿಕೆಯೂ ಒಂದು ಕೂಸೂ ಇರುವದನ್ನೂ ಮುತ್ತನು ಸದಾಶಿವನಿಗೆ ವರದಿ ಮಾಡಿದನು. ಸದಾಶಿವನು ಸ್ವತಃ ಅಲ್ಲಿಗೆ ಹೋಗಿ, ಬಹು ಪ್ರಯಾಸಪಟ್ಟು ಆ ಚೆನ್ನಮ್ಮ ನಿಂದ ಅವಳ ಚರಿತ್ರವನ್ನು ತಿಳಿದುಕೊಂಡು, ಅದರ ಸಹಾಯದಿಂದ ಈ ಒಂದು ತಂತ್ರವನ್ನು ಹೂಡಿದ್ದನು. ಆ ಕೂಸನ್ನೂ ತನ್ನ ಕಡೆಗೆ ತರಿಸಿದ್ದನನು.

ಮೇಲೆ ಹೇಳಿದಂತೆ ತಿರುಮಲನು ಹಣ್ಣಿನ ಬುಟ್ಟಿಯಿಂದ ಕೂಸನ್ನು ಹೊರಗೆ ತೆಗೆದು ಹಾಕಿದ ಬಳಿಕ ಹಣ್ಣುಗಳನ್ನು ತಿರುಗಿ ಬುಟ್ಟಿಯಲ್ಲಿ ತುಂಬುತ್ತಿರುವಾಗ ಸದಾಶಿವನು–"ತಿರುಮಲಾ, ತಿಮ್ಮನಾಯಕನು ಇನ್ನೂ ಬಂದಿಲ್ಲವೇ ?" ಎಂದು ಕೇಳಿದನು. ಏನೋ ಗುಂಗಿನಲ್ಲಿದ್ದ ತಿರುಮಲನು ತಲೆಯನ್ನಲ್ಲಾಡಿಸಿ ಇಲ್ಲವೆಂದು ಸೂಚಿಸಿದನು. ಬಳಿಕ ಸದಾಶಿವನು ಒಬ್ಬ ದಾಸಿಯನ್ನು ಕರೆಯಲು ತಿರುಮಲನಿಗೆ ಹೇಳಿ, ಬರೆದು ಮುಗಿಸಿದ ಪತ್ರ ವನ್ನು ಪುಟ್ಟಣ್ಣನ ಕೈಗೆ ಕೊಟ್ಟು ಹೇಗಾಗಿದೆ ನೋಡು ಎಂದನು. ಪುಟ್ಟಣ್ಣನು ಓದಿದನು

'ಸ್ವಸ್ತಿ ಶ್ರೀ ನೃಪೋತ್ತಮ ಬೀಳಗೀಶ ಘಂಟಿಯೊಡೆಯರಿಗೆ–ಅರಿಕೆ;

'ಒಡೆಯರೆ, ತಮ್ಮ ಪತ್ನಿ ದೇವಕ್ಕನವರೂ, ಅವರ ತಂಗಿ ಚೆನ್ನಮ್ಮನೂ ತಮ್ಮ ಕೂಸು ಬಂಡುಗಾರರ ಕೈಗೆ ಸಿಕ್ಕಿದ್ದನ್ನು ಕೇಳಿ ನಮಗೂ ಅಪಾರ ದುಃಖವಾಯಿತು. ನಿಮ್ಮ ಶೋಧನೆಗೂ ಗೊತ್ತಾಗದಿದ್ದುದಕ್ಕೆ ಮತ್ತಷ್ಟು ಕಳವಳವಾಗಿತ್ತು ಆದರೆ ನಮಗೆ ಅಕಸ್ಮಾತ್ತಾಗಿ ಆ ದುರ್ಘಟನೆಯು ಶೋಧ ವಾಗಿದೆ. ಅದನ್ನು ವಿಷಾದದಿಂದ ತಿಳಿಸುತ್ತೇವೆ. ಮುಚ್ಚಿಡುವದು ಯುಕ್ತ ವಲ್ಲ. ಅಪರಾಧಿಯನ್ನು ನೀವು ದಂಡಿಸಬಹುದು ಇಲ್ಲವೆ ಸುಮ್ಮನಾಗ ಬಹುದು. ಆರ್ಯ ಮಹಿಳೆಯರ ಮೇಲೆ ಅತ್ಯಾಚಾರವೆಸಗಿದ ಅಪರಾಧ ಕ್ಕಾಗಿ ಅವನನ್ನು ನಾವಾದರೂ ದಂಡಿಸಲೇಬೇಕು

'ಈ ಹೀನ ಕೆಲಸವನ್ನು ಮಾಡಿದವನು ವೀರಭದ್ರನಾಯಕನು. ಅವನ ಒಳಬಗೆಯನ್ನರಿಯದ ನೀವು ಒಮ್ಮೆಲೆ ಈ ಮಾತನ್ನು ನಂಬಲಿಕ್ಕಿಲ್ಲ. ಈ ಪತ್ರಿಕೆಯಲ್ಲಿ ವಿವರಿಸಿದುದಷ್ಟಕ್ಕೆ ನಿಮಗೆ ಹಾಗೆ ನಂಬಿಗೆಯಾಗದಿದ್ದರೆ, ಪ್ರತ್ಯಕ್ಷ ದಲ್ಲಿ ನಿಮಗೆ ಇನ್ನೂ ಹೆಚ್ಚಿನ ಪ್ರಮಾಣಗಳನ್ನು ಒದಗಿಸಬಹುದು. ಆಗ ಲಾದರೂ ನೀವು ಆತನ ಕೀಳು ಬಗೆಯನ್ನು ಕಾಣಬಹುದು

'ತಂದೆಯವರಿಂದ ಕಳುಹಲ್ಪಟ್ಟ ಪರಿವಾರದೊಡನೆ ಬರುತ್ತಿರುವ ತಮ್ಮ ರಾಣಿಯವರನ್ನೂ ಅವರ ತಂಗಿ ಚೆನ್ನಮ್ಮನನ್ನೂ ಸೈನ್ಯದೊಡನೆ ಸಹ್ಯಾದ್ರಿಯಲ್ಲಿ ಸಂಚರಿಸುವ ವೀರಭದ್ರನು ಕಂಡನಂತೆ. ಪ್ರಾಯದ ಸ್ತ್ರೀಯರನ್ನು ಅಪಹರಿಸುವ ದುರಾಶೆಯಿಂದ ಅವರನ್ನು ಮುತ್ತಿ ಪರಿವಾರವನ್ನು ನಾಶಪಡಿಸಿದನಂತೆ ! ಇನ್ನು ತಮ್ಮ ಮಾನಭಂಗವಾಗುವದೆಂದು ರಾಣಿಯವರು ಆ ಗಲಭೆಯಲ್ಲಿಯೇ ಆತ್ಮಹತ್ಯ ಮಾಡಿಕೊಂಡರಂತೆ ಮುಂದೆ ವೀರಭದ್ರನು ಅಡವಿಯಲ್ಲಿ ನಡೆದಿರುವಾಗ, ಅವನನ್ನು ದಂಡಿಸುವದಕ್ಕಾಗಿಯೇ ನಾವು ಕಳುಹಿದ ಸೈನ್ಯಕ್ಕೂ ಅವನಿಗೂ ಕಾಳಗವಾಗಿ ಅದರಲ್ಲಿ ಆತನು ತಲೆ ತಪ್ಪಿಸಿಕೊಂಡು ಚೆನ್ನಮ್ಮನನ್ನು ಅಪಹರಿಸಿಕೊಂಡು ಓಡಿಹೋಗಿರುವನು. ಕೂಸನ್ನು ಪಾಲಿಸುತ್ತಿದ್ದ ದಾಸಿಯು ನಮ್ಮವರ ವಶವಾಗಿರುವಳು. ಕೂಸು ನಮ್ಮ ಹತ್ತಿರ ಸುಖವಾಗಿದೆ. ಬೇಕಾದಾಗ ತಾವು ತಮ್ಮ ಮಗುವನ್ನು ತರಿಸಿಕೊಳ್ಳಬಹುದು.

'ವೀರಭದ್ರನು ಕಮಲಪುರದ ಕೋಟೆಯನ್ನು ಹಿಡಿದುಕೊಂಡು ತನ್ನ ಜನರೊಡನೆ ಅಲ್ಲಿ ಇರುವನು. ಅವನ ಸೆರೆಗೊಳಗಾದ ಚೆನ್ನಮ್ಮನ ಗತಿಯೇನೋ ನೀವೇ ಊಹಿಸಿರಿ. ನೆನೆದರೆ ನಮಗೆ ದುಃಖವಾಗುವದು. ಆ ಬಂಡುಗಾರನನ್ನು ದಂಡಿಸಲು ನಾವು ಕಮಲಪುರದ ಮೇಲೆ ದಂಡು ಕಳಿಸುವವರಿದ್ದೇವೆ. ನಿಮ್ಮ ಸ್ತ್ರೀಯರ ವಿನಾಶದಿಂದ ನಿಮ್ಮಲ್ಲಿ ಕ್ರೋಧವು ಉದ್ಭವಿಸಿದ್ದರೆ, ವೈರಿಯನ್ನು ದಂಡಿಸುವದು ಯುಕ್ತವೆಂದು ಕಂಡು ಬಂದರೆ, ನಿಮ್ಮಲ್ಲಿ ಪೌರುಷವಿದ್ದರೆ, ಆ ಸೈನ್ಯದೊಡನೆ ಬಂದು ನಮ್ಮನ್ನು ಕೂಡಬೇಕು; ಇಲ್ಲವಾದರೆ ಬಿಡಬೇಕು. ಇಕ್ಕೇರಿಯ ವೀರಒಡೆಯರ ಸೈನ್ಯವೊಂದೇ ಆ ಪುಂಡರನ್ನು ಸೆರೆಹಿಡಿದು ದಂಡಿಸಲು ಸಮರ್ಥವಾಗಿರುತ್ತದೆ. ಇದರಲ್ಲಿ ಸಂಶಯವಿಲ್ಲ.

ಇಕ್ಕೇರಿ ಒಡೆಯರ ಮಂತ್ರಿ
ಸದಾಶಿವನಾಯಕ ಜಂಬೂರ

"ಅನ್ನಬೇಕು ಇದಕ್ಕೆ ಮಾರ್ಮಿಕ ಬರೆಹವೆಂದು; ಇದನ್ನು ನೋಡಿ ಘಂಟೆಯೊಡೆಯರ ಹೃದಯ ಭೇದಿಸಿ ಹೋಗುವದು ನೋಡಿರಿ."

"ಆಷ್ಟೊಂದು ಪರಿಣಾಮ ಮಾಡೀತೇ ಪುಟ್ಟಣ್ಣ ? ವೀರಭದ್ರನು ನಮಗೆ ವೈರಿಯೇನೋ ನಿಜ ! ಆದರೆ ಆತನು ಪರಸ್ತ್ರೀ ಹರಣಮಾಡಿದನೆಂದು

ನಮಗೆ ಯಾರಾದರೂ ಹೇಳಿದರೆ ನಾವು ಕೂಡ ನಂಬುವದಿಲ್ಲ. ಈ ಪತ್ರ ದಿಂದ ಘಂಟಿಯೊಡೆಯರು ನಂಬುವದು ಎಂಥ ಮಾತೋ ಏನೋ ?"

ಒಮ್ಮೆಲೆ ನಂಬಲಿಕ್ಕಿಲ್ಲ! ಪತ್ರನೋಡಿ ಚಕಿತರಾಗಿ ಅವರು ನಿಜಾಂಶ ವನ್ನು ಶೋಧಿಸಲಾದರೂ ಯತ್ನಿಸುವರಲ್ಲ! ಆಗ ನಾವೂ ನಮ್ಮ ರಚನೆ ಯಂತೆ ಸಿದ್ಧಮಾಡಿ ಕೊಟ್ಟರಾಯಿತು. ಕಳೆದ ವರ್ಷ ವೀರಭದ್ರನು ಅವ ರಿಂದ ಗಡಿನಾಡಿನ ಕೋಟೆಗಳನ್ನು ಸೆಳೆದುಕೊಂಡ ಸಿಟ್ಟಂತೂ ಇದ್ದೇ ಇರು ವದು. ಅವರಿಗೆ! ಈಗ ವೀರಭದ್ರನ ಮೇಲೆ ದಂಡೆತ್ತಿ ಬಂದರೆ ನಾವು ಅವು ಗಳನ್ನು ಬಿಟ್ಟುಕೊಡುತ್ತೇವೆಂದು ಹೇಳೋಣ."

"ಹೇಳೋಣ ಹೇಳೋಣ, ಕೈ ಬಿಡದೆ ಕೆಲಸವಾಗುವದಿಲ್ಲ.

"ಅಷ್ಟಾದರೆ ಅವರು ನಿಶ್ಚಯವಾಗಿ ನಮ್ಮ ಸಹಾಯಕ್ಕೆ ಬರುವರು. ಸ್ವಾದಿಯ ಅರಸನಿಗೂ ಘಂಟಿಯೊಡೆಯರಿಗೂ ಬಹಳ ಸ್ನೇಹ! ಸ್ವಾದಿಯ ಅರಸರೂ ನಮ್ಮ ನೆರವಿಗೆ ಬರಬಹುದು "

"ಆ ಮೇಲೆ ವೀರಭದ್ರನು ಮೇಲಿರುವನೋ ಕೆಳಗಿರುವನೋ ನೋಡ ಲಿಕ್ಕಾಗುವದು."

ಹೀಗೆ ಮಾತು ನಡೆದಿರುವಾಗಲೇ ಪತ್ರದ ವಿಳಾಸ ಮುದ್ರೆಗಳಾ ದವು. ಅಷ್ಟರಲ್ಲಿ ತಿರುಮಲನು ದಾಸಿಯನ್ನು ಕರೆತಂದನು. ಸದಾಶಿವನು ಆಕೆಗೆ "ತುಂಗಾ ಈ ಕೂಸು ನಮ್ಮ ಬೀಳಗಿಯರಸರ ಮಗಳು. ಇದು ತಾಯಿಯನ್ನಗಲಿ ಅಕಸ್ಮಾತ್ತ ನಮ್ಮ ಕೈಗೆ ದೊರಕಿದೆ. ಇದನ್ನು ಸ್ವಲ್ಪ ದಿನಗಳಲ್ಲಿ ಅವರಿಗೆ ಮುಟ್ಟಿಸತಕ್ಕವರಿದ್ದೇವೆ. ಆ ವರೆಗೂ ನೀನು ಇದನ್ನು ಜೋಕೆಮಾಡು. ಏನಾದರೂ ಹೆಚ್ಚು ಕಡಿಮೆಯಾದರೆ ನಿನ್ನ ತಲೆದಂಡ ವಾದೀತು, ಎಚ್ಚರ ! ಹೂಂ ತೆಗೆದುಕೋ ಇದನ್ನು" ಎಂದನು.

ಕೂಸಿಗೆ ಇನ್ನೂ ಅಫುವಿನ ಅಮಲು : ಅದು ನಿದ್ರಿಸುತ್ತಲೇ ಇತ್ತು. ಹಣ್ಣಿನ ಬುಟ್ಟಿಯಲ್ಲಿ ಮುಚ್ಚಿಟ್ಟುಕೊಂಡು ಬರುವಾಗ ಅದು ಅಳು ಕರೆವು ದನ್ನು ಮಾಡಬಾರದೆಂದು ಅಫು ತಿನ್ನಿಸುತ್ತ ಬಂದಿದ್ದರು. ದಾಸಿಯು ಅಂಜಂಜುತ್ತ ಮುಂದೆ ಬಂದು 'ಇದು ಯಾವ ಆಟದ ಮೂಲವೋ ಏನು ತಂತ್ರ ನಡೆಯಬೇಕಾಗಿದೆಯೋ, ಇದು ನನ್ನ ಕೊರಳಿಗೇಕೆ ಬಿತ್ತು ?' ಎಂದು ಮನದಲ್ಲಿ ಅನ್ನುತ್ತ ಸದಾಶಿವನನ್ನು ಶಪಿಸುತ್ತ ಕೂಸನ್ನು ಎತ್ತಿ

ಕೊಂಡು ಹೋದಳು. ಬಳಿಕ ಬೀಳಿಗೆ ಹೋಗುವ ರಾಹುತನನ್ನು ಕರೆಯಲು ತಿರುಮಲನಿಗೆ ಅಪ್ಪಣೆಯಾಯಿತು. ತಿರುಮಲನು ಹುಬ್ಬುಗಂಟಿಕ್ಕಿಕೊಂಡು ಮೆಲ್ಲನೆ ಮರಳಿ ನಡೆದನು. ಇತ್ತ ಮತ್ತೆ ಮಾತಿಗಾರಂಭವಾಯಿತು

“ ತಿಮ್ಮನಾಯಕನು ಎತ್ತ ಹೋಗಿರಬಹುದು ? ”

“ ದೇವರಿಗೆ ಗೊತ್ತು, ಅವನಿಗೆ ಗೊತ್ತು ”

“ ಎಲ್ಲಿಯಾದರೂ ಗುಪ್ತನಾಗಿದ್ದು ಏನಾದರೂ ಕಾರಸ್ಥಾನ ನಡಿಸಿರಬಹುದೇ ? ”

“ ಬಹುಶಃ ಹಾಗೇನೂ ಇರಲಿಕ್ಕಿಲ್ಲ.”

“ ಅಥವಾ ಅವನೂ ಜಗನಂತೆ ವೀರಭದ್ರನನ್ನು ಕೂಡಿದನೋ ? ”

“ ಛೇ, ಅದು ಅಶಕ್ಯ ಮಾತು ! ವೀರಭದ್ರನಲ್ಲಿ ಅವನ ದ್ವೇಷವೆಷ್ಟು? ‘ ವೀರಭದ್ರನನ್ನು ನಾಶಮಾಡದ ಹೊರ್ತು ತನ್ನ ಹೃದಯಾಗ್ನಿ ನಂದದು’ ಎಂಬ ಮಂತ್ರವನ್ನು ಸದಾ ಜಪಿಸುತ್ತಿರವನು ”

“ ಹೌದು ಅದು ನಿನ್ನ ಚಾತುರ್ಯದ ಫಲ ! ಅವನಿಗೂ ವೀರಭದ್ರನಿಗೂ ನಡುವೆ ನೀನು ಉಗ್ರವಾದ ವೈರವನ್ನೇ ಉಂಟುಮಾಡಿರುವೆ. ಅವನು ಎಲ್ಲಿದ್ದರೂ ನಮ್ಮ ಗುಪ್ತ ಕಾರ್ಯಗಳನ್ನು ಹೊರಗೆಡವಿ ನಮಗೆ ಹಾನಿಯನ್ನು ಮಾಡಲಾರನು. ಹಾಗಾದರೆ ಅವನು ಎಲ್ಲಿ ಇರುವನು....?”

“ ನನಗಂತೂ ಅವನು ಅಂದಿನ ಯುದ್ಧದಲ್ಲಿ ಬಹುಶಃ ವೀರಭದ್ರನ ಸೈನಿಕರ ಶಸ್ತ್ರಕ್ಕೆ ತುತ್ತಾಗಿರುವನೆಂದೇ ಅನಿಸುತ್ತದೆ. ”

ಹಾಗಾದರೆ ನಮ್ಮದೊಂದು ಉತ್ತಮ ವಸ್ತುವೇ ಹೋಯಿತೆನ್ನಬೇಕಾಗುವದು. ”

“ ಅನ್ನಬೇಕು ; ಅದಕ್ಕೇನು ಮಾಡುವದು ?”

ತಾವು ಹೂಡಿದ ಗಾಡಿ ತಡೆಯಿಲ್ಲದೆ ನಡೆಯುವವೆಂದು ತಿಳಿದ ಈ ದುರಾಸಕ್ತರು, ಅತ್ತ ತಮ್ಮ ಕಪಟತಂತ್ರವು ಸತ್ವಶಾಲಿಗಳಿಂದ ಬಯಲಾಗುತ್ತಿರುವದನ್ನು ಅರಿಯರು. ಅಷ್ಟರಲ್ಲಿ ಪ್ರಯಾಣಕ್ಕೆ ಸಿದ್ಧನಾದ ರಾಹುತನು ಬರಲು, ಪತ್ರವನ್ನು ಕೊಟ್ಟು ಬೀಳಗಿಯ ಘಂಟಿಯೊಡೆಯರಿಗೆ ಜಾಗ್ರತೆಯಿಂದ ಮುಟ್ಟಿಸಬೇಕೆಂದು ಹೇಳಿ ಭೋಜನಕ್ಕೆ ಎದ್ದರು.

o o o o o

ಸದಾಶಿವನು ಊಟಮಾಡಿ ಬಂದು ವಿಶ್ರಾಂತಿಗೃಹದಲ್ಲಿ ಕುಳಿತಿದ್ದನು. ತಾಂಬೂಲದ ತಟ್ಟೆಯನ್ನು ಮುಂದೆಳೆದುಕೊಂಡು, ಬೇಕಾದುದನ್ನು ಮೆಲ್ಲುತ್ತಿದ್ದನು. ಗೋಡೆಯ ಮೇಲಿನ ಚಿತ್ರಪಟಗಳ ಕಡೆಗೆ ನೋಡಿದನು; ಹಿಂದಿನ ದಿಂಬಿನ ಮೇಲೆ ಒರಗಿಕೊಂಡನು; ಉರುಳಾಡಿದನು: ಕೈಕಾಲು ಚಾಚಿದನು; ಕಣ್ಣು ಮುಚ್ಚಿದನು, ತೆರೆದನು. ಏನು ಮಾಡಿದರೂ ವಿಶ್ರಾಂತಿ ಗೃಹದ ಪರಿಣಾಮವೇ ಆಗಲೊಲ್ಲದು; ವಿಶ್ರಾಂತಿ ದೊರೆಯಲೊಲ್ಲದು. ದುಷ್ಟಕಾರ್ಯಾಸಕ್ತರಾದವರ ಮನಸ್ಸು ಯಾವಾಗಲೂ ಉದ್ವಿಗ್ನತೆಯಿಂದ ಕುದಿಯುತ್ತಿರುವದು. ಅಂಥವರಿಗೆ ವಿಶ್ರಾಂತಿಗೃಹವೇನು ? ಸಂತೆಯ ಸ್ಥಳವೇನು ? ಉಪವನವೇನು ? ಹಾಳು ಜೈಲೇನು, ಎಲ್ಲವೂ ಒಂದೇ! ಸದಾಶಿವನ ಮನಸ್ಸು ಮತ್ತೆ ವಿಚಾರದಲ್ಲಿ ತೊಡಗಿತು. ಅವನ ಸ್ವಾಭಿಮಾನವು ಜಾಗ್ರತವಾಗಿ ವಿಕೃತ ರೂಪದಿಂದ ವಿಚಾರ ಕ್ಷೇತ್ರವನ್ನು ವ್ಯಾಪಿಸಿತು. ಘನವಾದ ಮಹತ್ವಾಕಾಂಕ್ಷೆಯು ಉದ್ಭವಿಸಿತು.

'ನಾನು ಎಂಥೆಂಥ ಮಹಾಕಾರ್ಯಗಳನ್ನು ಮಾಡಿದೆನಲ್ಲ! ಅರಸಾಗಲಿಕ್ಕೆ ಯೋಗ್ಯನಲ್ಲೆಂದು ನಿರ್ಣಯಿಸಲ್ಪಟ್ಟ ವೀರ ಒಡೆಯನನ್ನು ಪಟ್ಟದ ಮೇಲೆ ಕುಳ್ಳಿರಿಸಿದೆನು. ಪ್ರತಾಪಶಾಲಿಯಾದ ವೀರಭದ್ರನನ್ನು ಕವಲಪುರದಲ್ಲಿ ತೆಪ್ಪಗೆ ಕುಳ್ಳಿರಿಸಿಬಿಟ್ಟೆನು. ಆತನ ಆಶ್ರಿತರನ್ನೆಲ್ಲ ಹೊಡೆದೋಡಿಸಿಬಿಟ್ಟೆನು. ಇಕ್ಕೇರಿಯ ಸೂತ್ರವನ್ನೇ ನನ್ನ ಕೈಯಲ್ಲಿ ತೆಗೆದುಕೊಂಡೆನು. ಇದೆಲ್ಲವೂ ನನ್ನಿಂದಾಯಿತು. ಎಲ್ಲವೂ ನನ್ನ ಕೈಯಲ್ಲಿರುವದು. ನಾನು ಎಲ್ಲರಿಗೂ ಶ್ರೇಷ್ಠನು. ಆದರೂ ನಾನು ಅರಸನಾಗಲಿಲ್ಲವಲ್ಲ! ನನಗೀಗ ಪರಮಾಧಿಕಾರವಿಲ್ಲವೇ? ಹಾಗಾದರೆ ರಾಜಲಕ್ಷಣಗಳು ಸಿಂಹಾಸನವು ಛತ್ರಂಗಿಗಳು ಮಾತ್ರ ನನಗೇಕೆ ಬೇಡ? ಆದಾದರೂ ಯಾವ ದೊಡ್ಡ ಮಾತು? ಇದೀಗ ಸಿಂಹಾಸನಕ್ಕೆ ನಾನೇ ಯೋಗ್ಯನು. ಮೊದಲು ನಿಶ್ಚಯಿಸಲ್ಪಟ್ಟಂತೆ ವೀರ ಒಡೆಯರು ಅರಸುತನಕ್ಕೆ ನಿಜವಾಗಿಯೇ ಅಯೋಗ್ಯರು. ಸುಮ್ಮನೆ ಅವರನ್ನು ಪಟ್ಟದ ಮೇಲೆ ಕೂಡ್ರಿಸಿದಂತಾಯಿತು. ಮುಂದಾದರೂ ಸಮಯ ನೋಡಿ ನಾನೇ ಸಿಂಹಾಸನವನ್ನು ಹಿಡಿದುಕೊಳ್ಳಬೇಕು. ಆ ಸಮಯವು ಯಾವಾಗ ಬಂದೀತು? ಏನೇನು ಮಾಡಬೇಕಾದೀತು?........"

ಹೀಗೆ ಚಡಪಡಿಸುತ್ತಿರುವಾಗ ಪುಟ್ಟಣ್ಣನು ಅವಸರದಿಂದ ಬಂದು ನಾಯಕರೆ, ವೀರ ಒಡೆಯರು ಶಿವಾಧೀನರಾದರು; ಮುಂದಿನ ಮಾತು, ಏಳಿರಿ........"

"ಎಲಾ, ಹೀಗೇಕಾಯಿತೋ ? ನಡೆಯಣ್ಣ ಆ ಕಡೆಗೆ ಹೋಗೋಣ!"

ಅಸಮಾಧಾನದ ಸೋಗಿನಲ್ಲಿ ಆನಂದವನ್ನು ಅನುಭವಿಸುತ್ತ ಸದಾಶಿವನು ಮೇಲಕ್ಕೆದ್ದನು. ಇಬ್ಬರೂ ಹೊರಬಂದು ನಡೆದರು.

ವೀರ ಒಡೆಯರ ಮರಣದಿಂದ ಅವರ ಪರಿಚಾರಕರಿಗೆ ಮೋಕ್ಷಾನಂದವಾಗಿತ್ತು. ತನ್ನ ಬಯಕೆ ಕೈಗೂಡುವ ಸಮಯ ತಾನಾಗಿ ಒದಗಿತೆಂದು ಸದಾಶಿವನಿಗೆ ಹಿಗ್ಗು ! ಇನ್ನು ಮೇಲಾದರೂ ವೀರಭದ್ರನಾಯಕರು ಇಕ್ಕೇರಿಯನ್ನು ವಶಪಡಿಸಿಕೊಂಡು ತಮ್ಮ ಅರಸರಾಗುವರೆಂದು ನಾಗರಿಕರಿಗೆ ಸಮಾಧಾನ !

ವೀರ ಒಡೆಯನ ಸ್ಮಶಾನಯಾತ್ರೆಯು ಏರ್ಪಾಡು ಒತ್ತರದಿಂದ ನಡೆಯಿತು. ಸಾಯಂಕಾಲದ ಹೊತ್ತಿಗೆ ಮುಕ್ತಾಯಗೊಂಡಿತು. ರುದ್ರಭೂಮಿಯಲ್ಲಿ ರಾಜಕಾರಣಿಗಳು ಏನೊಂದೂ ಮಾತನಾಡಲು ಸಮರ್ಥರಾಗಿರಲಿಲ್ಲ. ಎಲ್ಲವೂ ಮೌನವಾಗಿಯೇ ಸಾಗಿತ್ತು. ಅದು ನ್ಯಾಯಾನ್ಯಾಯಗಳ ನಡುವಿನ ರುದ್ರಶಾಲೆಯೆಂಬತಿತ್ತು.

ಮನೆಗೆ ಬಂದಮೇಲೆ ಸದಾಶಿವನ ಮನಸ್ಸಿನಲ್ಲಿ ಮತ್ತೆ ಅದೇ ಮಂತ್ರ ! ಎಲ್ಲ ಸೂತ್ರವೂ ನನ್ನ ಕೈಯಲ್ಲಿದ್ದ ಮೇಲೆ ನಾನೇ ಏಕೆ ಅರಸನಾಗಬಾರದು ಎಂಬುದೇ ಆ ಮಂತ್ರ ! ·ಶ್ರಮಪಡತಕ್ಕವನು ನಾನು. ಎಲ್ಲ ಕಾರಸ್ಥಾನಗಳನ್ನು ರಚಿಸುವವನು ನಾನು, ಅವುಗಳನ್ನೂ ನಡಿಸುವವನು ನಾನು ! ಹೀಗಿದ್ದ ಮೇಲೆ ನನಗೇಕೆ ರಾಜಪದವಿಯು ದೊರೆಯಬಾರದು ? ದೊರೆಯತಕ್ಕದ್ದು. ಈಗ ನಾನು ರಾಜನಾಗುವದಕ್ಕೆ ಅಡೆತಡೆಯಾದರೂ ಏನು ? ದೇವರೇ ನನ್ನ ಮೇಲೆ ದಯಮಾಡಿ ವೀರ ಒಡೆಯನನ್ನೂ ಕಟ್ಟಿಕೊಂಡು ಹೋದನು. ಸಿಂಹಾಸನವನ್ನು ತೆರವು ಮಾಡಿದನು. ಈಗ ನಾನೇ ರಾಜನಾಗಲು ಯಾವ ಅಂಜಿಕೆಯೂ ಇಲ್ಲ.... ಅಂಜಿಕೆ.... ಇಲ್ಲವೇ ?.... ಇರುವದೋ ಇಲ್ಲವೋ ನೆಟ್ಟಗೆ ವಿಚಾರಿಸತಕ್ಕದ್ದು. ವೀರಭದ್ರನಂತೂ ರೆಕ್ಕೆ ಹೋದ ಹಕ್ಕಿಯಾಗಿದ್ದಾನೆ. ಘಂಟಿಯೊಡೆಯರ ಸಹಾಯವು ದೊರೆತರೆ

ಅವನನ್ನು ರಾಜ್ಯದಿಂದಲೇ ಹೊರಗಟ್ಟಲಾಗುವದು. ಇನ್ನು ಹಕ್ಕುದಾರ ನೆಂದರೆ ಬಸವಲಿಂಗನಾಯಕನು. ಅವನಿಂದ ಭಯವೇನು ? ಅರೆ ಹುಚ್ಚ ನವನು !.... ಓಹೋ ನನ್ನ ಗ್ರಹಿಕೆ ತಪ್ಪಾದದ್ದು ! ಬಸವಲಿಂಗನಾಯಕ ನಿಂದ ಭಯವಿಲ್ಲವೆಂದು ಅನ್ನಲಾಗುವದು. ರಾಜ್ಯಾಧಿಕಾರಿಯಾದ ಅವನನ್ನು ಮುಂದೆ ಮಾಡಿಕೊಂಡು ಜನರು ದೊಂಬಿಯನ್ನು ಎಬ್ಬಿಸಲಿಕ್ಕಿಲ್ಲವೆಂದು ಹೇಗೆ ಅನ್ನಬೇಕು ? ನನ್ನ ಸುಖದ ಸ್ವಪ್ನವನ್ನು ಬಸವಲಿಂಗನಾಯಕನು ಒಡೆದು ಕೆಡಿಸದೆ ಬಿಡನು. ಈಗ ನನ್ನ ಕಡೆಗೆ ಇರುವವರೇ ಅವನನ್ನು ಎಬ್ಬಿಸಿಕೂಡ್ರಿಸಿ ತಮ್ಮ ಪ್ರತಿಷ್ಠೆ ಮೆರೆಸಲು ಯತ್ನಿಸಬಹುದು.... ಅಂದ ಮೇಲೆ ಬಸವಲಿಂಗನಾಯಕನೂ ನನಗೆ ಶತ್ರುವೇ !.... ಶತ್ರುವನ್ನು ದುರ್ಬಲ ನೆಂದು ಅಲಕ್ಷಿಸಿದರೆ ಮುರ್ಖನಾಗುವೆನು. ಶತ್ರುವನ್ನೂ ನಾಶಮಾಡಲೇ ಬೇಕು. ಬಸವಲಿಂಗನಾಯಕನನ್ನು ನಾಶಮಾಡಿದರೆ ರಾಜ್ಯಕ್ಕೆ ಇರುವ ನನ್ನ ಹಕ್ಕು ನಿಷ್ಕಂಟಕವಾಗುವದು. ಸರಿ ಬಸವಲಿಂಗನಾಯಕನನ್ನು ನಾಶ ಮಾಡಲೇ ಬೇಕು........

ಇದನ್ನು ಯಾರಿಂದ ಮಾಡಿಸಬೇಕು ?........ ಬೇರೆ ಯಾರಾದರೂ ಏಕೆ ಬೇಕು ? ಅದು ಇಲ್ಲದ ಗೊಂದಲಕ್ಕೆ ಕಾರಣವಾಗುವದು.... ನಾನೇ ಅದನ್ನು ಮಾಡುವೆನು; ನಾನೇ ನನ್ನ ಶತ್ರುವಿನ ಕೊಲೆಯನ್ನೂ ಮಾಡು ವೆನು. ನನ್ನ ಮಾರ್ಗದಲ್ಲಿಯ ಮುಳ್ಳನ್ನು ನಾನೇ ಕಿತ್ತು ಚೆಲ್ಲುವೆನು. ಇದೇ ಅದಕ್ಕೆ ತಕ್ಕ ಸಮಯ ! ಇಂದಿನ ರಾತ್ರಿಯೇ ಅದು ಆಗಬೇಕು....! ಎಂದು ತನ್ನ ವಿಕಲ ವಿವೇಕಕ್ಕೆ ತಿಳಿಯದಂತೆ ನಿಶ್ಚಯ ಮಾಡಿಕೊಂಡು ಬಿಟ್ಟನು. ಘೋರ ಮಹತ್ವಾಕಾಂಕ್ಷೆಯ ಬಲೆಗೆ ಬಿದ್ದವರು ದಯಾಮಾಯೆ ಗಳನ್ನು ಮರೆಯುವದು ಏನಾಶ್ಚರ್ಯವು ?

ಅಂದು ರಾತ್ರಿ ಜನರೆಲ್ಲರು ಮಲಗಿ ಸುತ್ತಲೂ ಶಾಂತಿಯು ಸ್ಥಿರವಾದ ಬಳಿಕ ಸದಾಶಿವನು ಸಿದ್ಧನಾಗಿ ತನ್ನ ಕೋಣೆಯಿಂದ ಹೊರಬಿದ್ದನು. ನೆಟ್ಟಗೆ ಬಸವಲಿಂಗನಾಯಕನಿರುವ ಮಂದಿರಕ್ಕೆ ಬಂದನು. ಬಸವಲಿಂಗನಾಯಕನನ್ನು ಕಾಪಾಡುವ ಅರಸಾಳುಗಳು ಸದಾಶಿವನಾಯಕನನ್ನು, ಒಳಗೆ ಹೋಗುವಾಗ ತಡೆಯುತ್ತಿರಲಿಲ್ಲವಾದರೂ ದೈವಸಂಕಲ್ಪದಿಂದ ಅಂದು ಅವನನ್ನು ಯಾರೂ ನೋಡಲಿಲ್ಲ. ಅವನು ಭರದಿಂದ ಒಳಗೆ ನಡೆದನು.

ಬಸವಲಿಂಗನಾಯಕನು ದೀಪದ ಬೆಳಕಿನಲ್ಲಿ ಕಾಗದದ ಮೇಲೆ ಚಿತ್ರವನ್ನು ಬರೆಯುತ್ತ ಕುಳಿತಿದ್ದನು. ಸದಾಶಿವನನ್ನು ನೋಡಿ ಆತನು ಖೊಳ್ಳನೆ ನಕ್ಕನು.

" ನಾಯಕರೆ, ಇದೇನು ಈಗ ಬಂದಿರಿ ? ಅಣ್ಣನ ಸ್ಥಳದಲ್ಲಿ ಅರಸಾನಾಗೆಂದು ನನ್ನನ್ನು ಕರೆಯ ಬಂದಿರಾ ? ನಾನೊಲ್ಲೆನು ನಿಮ್ಮ ರಾಜ್ಯಗೀಜ್ಯವನ್ನು ! ನಾನೀಗ ಚಿತ್ರಬರೆಯುತ್ತಿರುವೆನು; ನೋಡು, ಸದಾಶಿವಾ ನಿನ್ನದೊಂದು ಚಿತ್ರ ಬರೆಯಲಿಯಾ ? ತರುಣ ನೀನು ತಿದ್ದಿದ ಮೀಸೆ, ದುಂಡ ಮುಖ ಬಹಳ ಚನ್ನಾಗಿ ಕಾಣುವೆ ! ಆಗ ನೀನು ಸಿಂಹಾಸನದ ಮೇಲೆ ಕುಳಿತರಂತೂ ಇನ್ನೂ ಬಹಳ ಚೆಂದಾಗಿ ಕಾಣುವೆ ! ಆಗ ನಾನೊಂದು ನಿನ್ನ ಚಿತ್ರ ಬರೆಯುವೆನು. ಸದೂ, ನಾನು ಮುದಕ, ನೀನು ತರುಣ, ನೀನೇ ರಾಜನಾಗಪ್ಪ ! ಹಾ ಹಾ ಹಾ ಅಳಿಯ ರಾಜನಾದರೆ ಆನಂದ ನನಗೆ ! ರಾಜನಾಗಲು ನನಗೆ ಅವಕಾಶವೆಲ್ಲಿ ? "

" ಹೂಂ ಅವಕಾಶವಿದೆ, ರಾಜನಾಗು ! ರಾಜನಾಗು !!

ಖಡ್ಗವನ್ನೇ ಹಿರಿದನು ಸದಾಶಿವನು.

" ನಾಯಕರೆ, ಒಲ್ಲೆನೆಂದರೆ ಆಗ್ರಹವೇಕೆ ? ನಾನು ನಿಮ್ಮ ಖಡ್ಗವನ್ನೂ ಒಲ್ಲೆನು; ರಾಜ್ಯವನ್ನೂ ಒಲ್ಲೆನು, ಖಡ್ಗವು ಕ್ರೂರವಾದದ್ದು ! ಅದರ ಸಂಗತಿಯೇ ಬೇಡ, ಸದೂ, ನನಗೆ ! "

ಸದಾಶಿವನು ಎಡಗೈಯಿಂದ ಅವನ ತಲೆಗೂದಲನ್ನು ಹಿಡಿದು ಬಾಗಿಸಿದನು

" ಅಯ್ಯೋ ನಾನು ಒಲ್ಲೆನೆಂದರೆ ನೀವು ಕೇಳುವದಿಲ್ಲ. ನಾಯಕರೇ ಹಾಗಾದರೆ ನಿಮ್ಮ ಇಚ್ಛೆಯಂತೇ ರಾಜನಾಗುವೆನು ಕೂದಲ ಬಿಡಿರಿ. ನನ್ನನ್ನು ಬಿಡಿರಿ ಬಿಡಿರಿ ! ಕೊಡಿರಿ ಆ ಖಡ್ಗವನ್ನು ! "

ಎರಡೂ ಕೈಗಳಿಂದ ತನ್ನ ತಲೆಯನ್ನು ಬಿಡಿಸಿಕೊಳ್ಳಲು ಯತ್ನಿಸುತ್ತಿದ್ದನು.

ಸದಾಶಿವನು ಆ ಎರಡೂ ಹಸ್ತಗಳೊಡನೆ ಆತನ ರುಂಡವನ್ನು ಕತ್ತರಿಸಿ ಹಾಕಿದನು. ಕೂಡಲೆ ಆ ಮಂದಿರದ ಬಾಗಿಲ ಮುಚ್ಚಿ ಹೊರಬಿದ್ದನು. ರಾತ್ರಿಯೂ ಅವನಿಗೆ ಅಂಜಿದ್ದಿತೇನೋ ಎಲ್ಲಿಯೂ ಸದ್ದಿಲ್ಲ !

ಯಾವದನ್ನೂ ಅರಿಯದ, ಅನ್ಯರಿಗೆ ಬೇಸರವಾಗದ, ನೋಡಿದರೆ ಕರುಣ ಬರುವ ನಿರುಪದ್ರವದ ಬಸವಲಿಂಗನಾಯಕನನ್ನು ನಿರ್ದಯನಾಗಿ ಕೊಂದ ಸದಾಶಿವನ ಹೃದಯವು ಎಂಥದಿದ್ದೀತು ? ಆತನ ಮಹತ್ವಾಕಾಂಕ್ಷೆಗೆ ರಾಕ್ಷಸೀ ಮಹತ್ವಾಕಾಂಕ್ಷೆಯೆಂದರೂ ಅದರ ಭೀಕರ ಸ್ವರೂಪವು ಸ್ಪಷ್ಟವಾದೀತೇ ?

—

## ೧೦. ಧರ್ಮವೇ ಜಯ ಪಡೆಯುವದು.

ವೀರಭದ್ರರಾಜನು ಸಿಂಹಾಸನಕ್ಕಾಸೆಬಡದೆ ಕವಲಪುರದಲ್ಲಿ ನಿಂತರೂ ರಾಜ ವೈಭವವು ಅವನ ಬೆನ್ನು ಬಿಡಲಿಲ್ಲ. ಪರಿವಾರ, ಸೈನ್ಯ, ಶಂಕರನಾರಾಯಣ, ಲಿಂಗರಾಜ ಇವರೆಲ್ಲರು ಅರಸನನ್ನು ಅನುಸರಿಸಿಯೇ ಇದ್ದರು. ಕೈತೂರು, ನಂದನಪುರ ಮೊದಲಾದ ನಾಲ್ಕೆಂಟು ಕೋಟೆಗಳು ಅವನ ವಶವದಲ್ಲಿಯೇ ಇದ್ದವು. ಇಕ್ಕೇರಿಯ ರಾಜ್ಯದೊಳಗಿನ ಮುಖ್ಯ ಜನರ ಹಾಗು ಪಾಳಯಗಾರರ ಲಕ್ಷವೆಲ್ಲ ಕವಲಪುರದ ಕಡೆಗೇ ಇದ್ದಿತು. ಅವರಿಗೆ ಅದೇ ರಾಜಧಾನಿಯಾಗಿದ್ದಿತು. ರಾಜ್ಯಾದಾಯದ ಬಹುಭಾಗವು ಕವಲಪುರಕ್ಕೆ ಬರಹತ್ತಿತು. ತವರಿಗೆ ಹೋಗಿದ್ದ ರಾಜಪತ್ನಿಯೂ ಕವಲಪುರಕ್ಕೆ ಬಂದಿದ್ದಳು. ಅರಸೊತ್ತಿಗೆಯನ್ನು ಒಲ್ಲದ ವೀರಭದ್ರನಾಯಕನನ್ನು ಅರಸುಸಿರಿಯು ತೊಲಗಲಿಲ್ಲ. ಯಾವ ಮಾತಿನ ಕೊರತೆಯೂ ಇಲ್ಲದೆ ಆತನ ರಾಜ್ಯದಾಡಳಿತೆಯು ತನ್ನಿಂದ ತಾನೇ ನಡೆಯಿತು.

ಒಂದು ದಿನ ಒಂದು ತಾಸು ಹೊತ್ತು ಏರಿತು. ಕವಲಪುರದ ಅಧಿಕಾರಿಗಳು ಎಂದಿನಂತೆ ರಾಜಾಧಿಕರಣದ ತಮ್ಮ ಕಾರ್ಯದಲ್ಲಿ ತೊಡಗಿದರು. ಆದರೆ ಮುಂದೆ ಎರಡು ತಾಸು ಹೊತ್ತು ಏರಿದರೂ ನಿತ್ಯದಂತೆ ಅರಸನು ಅಧಿಕರಣದ ಚಾವಡಿಗೆ ಬರಲೇ ಇಲ್ಲ. ಆಶ್ಚರ್ಯಗೊಂಡ ಶಂಕರನಾರಾಯಣನು ಅಂತಃಪುರದ ಕಡೆಗೆ ನಡೆದನು. ಅರಸನ ಗೃಹವ್ಯವಸ್ಥೆಯಲ್ಲಿಯೂ ಶಂಕರನಾರಾಯಣನಿಗೆ ಅಧಿಕಾರವಿತ್ತು. ಆತನು ಅರಸನ ಶಯನ ಮಂದಿರದ ಬಾಗಿಲಿಗೆ ಬಂದನು. ಅರಸರು ಎದ್ದು ಇನ್ನೂ ಹೊರಗೆ ಹೋಗಿಲ್ಲವೆಂದು ಬಾಗಿಲುಗಳಿಂದ ತಿಳಿಯಿತು. ಹಾಗೆಯೇ ಒಳಗೆ ನಡೆದನು. ಅರಸನು

ಮಲಗಿಕೊಂಡ ಸ್ಥಳದ ಪರದೆಯನ್ನು ಓರೆಮಾಡಿ ಒಳಗೆ ನೋಡಿ ಹಾಕಿದನು. ಅರಸನಿಲ್ಲ. 'ಅಯ್ಯೋ ಘಾತವಾಗಿದೆ'ಯೆಂದು ಕೂಗಿದನು. ಪರಿವಾರವೆಲ್ಲ ಓಡಿ ಬಂದಿತು. ಅರಸನ ಮಂಚದ ಹತ್ತಿರ ನೆಲದಲ್ಲಿ ಒಂದು ತಗ್ಗು ಬಿದ್ದು ಅದು ಒಂದು ನೆಲಮಾರ್ಗದ ಬಾಯಿಯೆಂಬಂತೆ ತೋರಿತು. ಯಾರೋ ಆ ಮಾರ್ಗವಾಗಿ ಬಂದು ವೀರಭದ್ರರಾಜರನ್ನು ಅಪಹರಿಸಿಕೊಂಡು ಹೋಗಿರುವರೆಂಬ ಸುದ್ದಿಯು ಆ ಕೂಡಲೆ ಕೋಟೆಯಲ್ಲೆಲ್ಲ ಹಬ್ಬಿತು. ಚಾವಡಿಯಲ್ಲಿ ನೆರೆದವರೆಲ್ಲರು ಅರಮನೆಯನ್ನು ಸೇರಿ ನೋಡಿದರು. ವೈರಿಗಳ ಈ ದೀರ್ಘಸಾಹಸಕ್ಕೆ ಎಲ್ಲರೂ ಬೆರಗಾದರು.

ಲಿಂಗರಾಜನು ಜೀವಕ್ಕೆ ಜೀವ ಕೊಡುವ ಹತ್ತಿಪ್ಪತ್ತು ಜನರೊಡನೆ ಆ ತಗ್ಗಿನಲ್ಲಿ ಹಾರಿಕೊಂಡನು. ಅವರು ಧೈರ್ಯದಿಂದ ಆ ನೆಲಮಾರ್ಗದಲ್ಲಿ ನಡೆದರು. ಕೆಲವಂತರದಲ್ಲಿಯೇ ಬೆಳಕು ಕಂಡಿತು; ಬೈಲಿಗೆ ಬಂದರು, ಆ ಮಾರ್ಗದ ಎರಡನೆಯ ಬಾಯಿಯು ಕೋಟೆಗೆ ಹೊಂದಿ ಇರುವ ಹೊರಬದಿಯ ಒಂದು ದೊಡ್ಡ ಕೊಳ್ಳದಲ್ಲಿತ್ತು. ಲಿಂಗರಾಜನಿಗೆ ಮುಂದೆ ಶೋಧದ ಹಾದಿ ಹತ್ತದಾಯಿತು. ಇನ್ನು ಈ ಸ್ವಲ್ಪ ಜನರಿಂದ ಕೆಲಸವಾಗದೆಂದು ಬಗೆದು ತಿರುಗಿ ಕೋಟೆಯೊಳಗೆ ಬಂದನು. ಬಳಿಕ ಬಲಿಷ್ಠರಾದ ಇನ್ನೂರು ಜನ ರಾಹುತರನ್ನು ಕರೆದುಕೊಂಡು ಸಹ್ಯಾದ್ರಿಯ ಅರಣ್ಯವನ್ನು ಹೊಕ್ಕು ಶೋಧಿಸಹತ್ತಿದನು. ಇಲ್ಲೆಲ್ಲಿಯೂ ದೊರೆಯದಿದ್ದರೆ ಅರಸನು ಇಕ್ಕೇರಿಯಲ್ಲಿ ಸದಾಶಿವನ ಸೆರೆಯಾಗಿ ಇರಲೇಬೇಕೆಂದು ತಿಳಿದಿದ್ದನು. ಆದ್ದರಿಂದ ಕವಲಪುರದಲ್ಲಿ ಉಳಿದ ಭಟನಾಯಕರಿಗೆ ಯುದ್ಧದ ಸಾರಣೆಯನ್ನಾದರೂ ಮಾಡಹೇಳಿ ಬಂದಿದ್ದನು. ಇದಕ್ಕೆ ಶಂಕರನಾರಾಯಣನೂ ಒಪ್ಪಿದ್ದನು. ಕಳ್ಳರ ಗುಪ್ತಸ್ಥಾನ, ಗವಿ, ಕಂದರಗಳನ್ನೆಲ್ಲ ಬಿಡದೆ ನೋಡುತ್ತ ನಡೆದನು. ಆದರೂ ದೊರೆಯಬೇಕಾದ ಸ್ಥಳವು ದೊರೆಯಲೇ ಇಲ್ಲ. ಅರಸನು ಇಕ್ಕೇರಿಯಲ್ಲಿಯೇ ಸೆರೆಯಾಗಿರಬೇಕೆಂಬ ಲಿಂಗರಾಜನ ಕಲ್ಪನೆಯು ದೃಢವಾಗಹತ್ತಿತು. ಆದರೂ ಇಂದು ಈ ಶೋಧವನ್ನು ಪೂರ್ಣಗೊಳಿಸಿ ನಾಳೆಯೇ ಇಕ್ಕೇರಿಯ ಸಮಾಚಾರ ತೆಗೆದುಕೊಳ್ಳಬೇಕೆಂದು ನಿಶ್ಚಯಿಸಿದ್ದನು. ಅಪರಾಹ್ನದಲ್ಲಿ ಶೈತೂರ ಮಾರ್ಗದ ಬಳಿಯಲ್ಲಿ ಸಂಚರಿಸುತ್ತಿರುವಾಗ, ಶೈತೂರ ಕಡೆಯಿಂದ ಇಬ್ಬರು ಅಶ್ವಾರೂಢರು ಅವಸರದಿಂದ ಬರುವದನ್ನು ಕಂಡರು.

ಕುದುರೆಗಳನ್ನೋಡಿಸುತ್ತ ಅವರು ಸಮೀಪಕ್ಕೆ ಬಂದರು. ತಮ್ಮ ಪಕ್ಷದ ಜಗನ್ನಾಯಕನು ವೈರಿ ಪಕ್ಷದ ತಿಮ್ಮನಾಯಕನೊಡನೆ ಬರುತ್ತಿರುವದನ್ನು ನೋಡಿ, ಲಿಂಗರಾಜ ಮೊದಲಾದವರು ವಿಸ್ಮಿತರಾದರು.

o o o o

ತಿಮ್ಮನಾಯಕನು ಜಗನ್ನಾಯಕನ ಮುಖಾಂತರವಾಗಿ ವೀರಭದ್ರ ನಿಂದ ಕ್ಷಮೆಯನ್ನು ಪಡೆಯಬೇಕೆಂದು ಶೈತೂರ ಕಡೆಗೆ ನಡೆದುದನ್ನು ಹಿಂದೆ ಹೇಳಿದೆ. ತನ್ನ ಬಗೆಗೆ ಅವರೀರ್ವರಲ್ಲಿ ಹೇಗೆ ನಂಬಿಗೆಯುಂಟಾದೀತೆಂಬುದೇ ಅವನ ಚಿಂತೆಯಾಗಿತ್ತು. 'ತನ್ನ ಕತೆಯನ್ನೆಲ್ಲ ಜಗನ್ನಾಯಕನ ಮುಂದೆ ನೆಲ ಬಿದ್ದು ಹೇಳಿಕೊಂಡರಾಯಿತು. ಮುಂದೆ ಅರಸನಿಗೆ ನಂಬಿಗೆಯಾಗುವಂತೆ ಅವನೇ ಯತ್ನಿಸುವನು.' ಎಂಬ ವಿಚಾರದಿಂದ ಆತ ಧೈರ್ಯ ತಾಳಿದ್ದನು. ಜಗನ್ನಾಯಕರು ಶೈತೂರಲ್ಲಿ ತನ್ನ ಚಿಕ್ಕ ಓಲಗದಲ್ಲಿ ಕುಳಿತಿರುವಾಗ ತಿಮ್ಮ ನಾಯಕನು ರುಮಾಲದಿಂದ ತನ್ನ ಕೈಗಳನ್ನು ಕಟ್ಟಿಕೊಂಡು ಬಂದು ಆತ ನೆದುರಿಗೆ ನಿಂತನು; ಅವನ ಕಣ್ಣುಗಳಿಂದ ನೀರು ಬರುತ್ತಿದ್ದವು. ತಮ್ಮ ಹಗೆಯಾದ ತಿಮ್ಮನಾಯಕನ ದೈನ್ಯದಿಂದ ಎಲ್ಲರಿಗೂ ಆಶ್ಚರ್ಯ. ಇದರಲ್ಲಿ ಏನಾದರೂ ಮೋಸವಿರಬಹುದೆ ಎಂದೂ ಎನಿಸಿತು. ಆದಾಗ್ಯೂ ಈ ನಮ್ರ ವರ್ತನವೂ ಖೇದಗೊಂಡ ಮುಖಮುದ್ರೆಯೂ ಜಗನ್ನಾಯಕನ ಹೃದಯವನ್ನು ಕರಗಿಸದೆ ಬಿಡಲಿಲ್ಲ. ಅವನ ಕಣ್ಣುಗಳಿಂದಲೂ ತನ್ನಿಂದ ತಾನೇ ನೀರು ಬಂದಿತ್ತು. ಅತನು ಚಟ್ಟನೆ ಎದ್ದು ತಿಮ್ಮನಾಯಕನ ಕೈಗಳನ್ನು ಬಿಚ್ಚಿ ಹೀಗೆಂದನು :

"ತಿಮ್ಮನಾಯಕರೆ, ನನ್ನ ಮುಂದೆ ನೀವು ಹೀಗೆ ವರ್ತಿಸುವದೇ ? ನಾವಿಬ್ಬರು ಸಮಾನರು; ಅಲ್ಲದೆ ಪೂರ್ವದ ಮಿತ್ರರು. ನನ್ನ ಹತ್ತಿರ ಕುಳಿತು ಕುಶಲಗಳನ್ನಾಡಿರಿ."

"ನನಗೆಲ್ಲಿ ನಿಮ್ಮ ಸಮ ಯೋಗ್ಯತೆಯು ? ವೀರಭದ್ರಒಡೆಯರ ಅನು ಗ್ರಹಕ್ಕೆ ಪಾತ್ರರಾದವರು ನೀವು! ಆ ಸತ್ಪ್ರಭುವಿಗೆ ದ್ರೋಹವನ್ನು ಚಿಂತಿಸಿ, ಕೇಡು ಬಗೆದ ಪಾಪಿಯು ನಾನು !........"

"ನಿಮ್ಮ ನುಡಿಗಳಿಂದ ನನಗೆ ಕನಿಕರವಾಗುತ್ತಿದೆ, ನೀವು ಈಗ ಪಶ್ಚಾ ತ್ತಾಪಬಡುತ್ತೀರಿ;"

"ನಾನು ಪಶ್ಚಾತ್ತಾಪ ಪಡುತ್ತಿರುವದು ಎಷ್ಟೆಂಬುದನ್ನು ನೀವು ಈಗಲೇ ತಿಳಿಯಲಾರಿರಿ. ನನ್ನನ್ನು ಸ್ವಾಮಿ ದ್ರೋಹಕ್ಕೆ ನೂಕಿದ, ಇಂದು ಮತ್ತೆ ನನ್ನ ಹೃದಯವನ್ನೇ ಶುದ್ಧ ಗೊಳಿಸಿದ ನನ್ನ ಗೂಢ ಚರಿತ್ರವನ್ನು ಕೇಳಿದ ಬಳಿಕ ತಿಳಿಯುವಿರಿ.

"ಆಗಲಿ ಮೊದಲು ನನ್ನ ಹತ್ತಿರ ಕುಳಿತು ಸ್ವಲ್ಪ ವಿಶ್ರಮಿಸಿರಿ. ಬಳಿಕ ನಿಮ್ಮ ಗೂಢ ಚರಿತ್ರವನ್ನು ಬೇಕಾದರೆ ಹೇಳಿರಿ."

ಜಗನಾಯಕನು ಆತನನ್ನು ತನ್ನ ಆಸನದಲ್ಲಿ ಕುಳ್ಳಿರಿಸಿಕೊಂಡನು. ಓಲಗವನ್ನು ಮುಕ್ತಾಯಗೊಳಿಸಿದನು. ಅವನ ಸಂಜ್ಞೆಯನ್ನು ತಿಳಿದು ಭಟರು ಕೋಟೆಯ ಒಳಗೂ ಹೊರಗೂ ತಿರುಗಾಡಿ ತಿಮ್ಮನಾಯಕನ ಅನುಯಾಯಿಗಳು ಬೇರೆ ಯಾರೂ ಇಲ್ಲವೆಂಬದನ್ನು ಮನಗಾಣಿಸಿಕೊಂಡರು. ಬಳಿಕ ಜಗನಾಯಕನು ತಿಮ್ಮನಾಯಕನೊಡನೆ ಏಕಾಂತಗೃಹವನ್ನು ಪ್ರವೇಶಿಸಿದನು.

ತಿಮ್ಮನಾಯಕನು, ತನ್ನ ಮನಸ್ಸನ್ನು ಕೆಡಿಸಲು ಪುಟ್ಟಣ್ಣನು ಮಾಡಿದ ಕಪಟ ತಂತ್ರ ಮೊದಲುಗೊಂಡು, ಶರಣಮ್ಮನ ಬಳಿಯಲ್ಲಿ ಸತ್ಯವನ್ನರಿತು, ವೀರಭದ್ರರಾಜರ ಸೇವೆಗಾಗಿ ಪ್ರತಿಜ್ಞೆ ಮಾಡಿದುದರ ವರೆಗಿನ ತನ್ನ ಚರಿತ್ರವನ್ನು ವಿಶದವಾಗಿ ಹೇಳಿದನು. ಮತ್ತು ವೀರಭದ್ರರಾಜರಿಗೆ ನಂಬಿಗೆಯುಂಟಾಗುವಂತೆ ಹೇಳಿ, ತನಗೆ ಕ್ಷಮೆ ಕೊಡಿಸಬೇಕೆಂದು ಬೇಡಿಕೊಂಡನು. ಜಗನಾಯಕನು ಕೇಳಿ ಕೌತುಕಬಟ್ಟನು. ಆತನಿಗೆ ಆ ಮಾತುಗಳಲ್ಲಿ ನಂಬಿಕೆಯುಂಟಾಯಿತು. ದುಷ್ಟರ ತಂತ್ರಗಳನ್ನು ನೆನಿಸಿ ಅವನು ಮತ್ತಷ್ಟು ಸಂತಪ್ತನಾದನು. ಸದಾಶಿವ-ಪುಟ್ಟಣರನ್ನು ಸುಟ್ಟುಬಿಡುವಂತೆ ಸಿಟ್ಟು ಅವನಿಗೆ ಬಂದಿತು! ಆದರೂ ಸಾವಧಾನದಿಂದ ವಿಚಾರಿಸಿ ಹೇಳಿದನು :

"ನೀವು ಚಿಂತಿಸದಿರಿ; ಸಮಯ ನೋಡಿ ವೀರಭದ್ರದೊರೆಗಳನ್ನು ಕಾಣೋಣ! ನೀವು ಹೀಗೆ ನಮ್ಮ ಪಕ್ಷಕ್ಕೆ ಕೂಡಿದ್ದು ಸದಾಶಿವನಿಗೆ ಬೇಗ ತಿಳಿಯದಿದ್ದಷ್ಟು ಒಳ್ಳೆಯದೇ ಆಗುವದು. ಆದ್ದರಿಂದ ನೀವು ಕೆಲವು ದಿವಸ ನಮ್ಮಲ್ಲಿ ಗುಪ್ತವಾಗಿರ್ರಿ. ಯುದ್ಧಕಾಲದಲ್ಲಿ ಒಡೆಯರಿಗೆ ನಿಮ್ಮಿಂದ ಬಹಳ ಉಪಯೋಗವಾಗುವದು. ಆಗ ನಿಶ್ಚಯವಾಗಿ ಅವರ ಅನುಗ್ರಹ ದೊರೆಯುವದು."

ಆ ಇಬ್ಬರು ಶ್ರೇಷ್ಠ ಸರದಾರರು ಶೈತೂರಲ್ಲಿಯೇ ಒಳಗೊಳಗೆ ಯುದ್ಧದ ಸಿದ್ಧತೆಯನ್ನು ನಡಿಸಿದ್ದರು. ಒಂದೆರಡು ತಿಂಗಳ ಕಾಲಕಳೆಯಿತು. ಅಷ್ಟ ರಲ್ಲಿ ಸದಾಶಿವನು ಬೀಳಗಿ ಸ್ವಾದಿ ಅರಸರ ಸಹಾಯದಿಂದ ಕವಲಪುರದ ಮೇಲೆ ದಂಡೆತ್ತಿ ಬರುವನೆಂದು ತಿಳಿಯಿತು. ಅದರಿಂದ ಜಗನಾಯಕನು ಒಡೆ ಯರಿಗೆ ಭೆಟ್ಟಿಯಾಗಿ ಮುಂದಿನ ಕಾರ್ಯದ ಆಲೋಚನೆ ಮಾಡಬೇಕೆಂದೂ, ತಿಮ್ಮನಾಯಕನ ತಪ್ಪಿನ ವಿಷಯದಲ್ಲಿ ಅವರಿಂದ ಕ್ಷಮೆಯನ್ನು ಸಂಪಾದಿಸ ಬೇಕೆಂದೂ ಆಲೋಚಿಸಿದನು. ಅದರಂತೆ ಅವರಿಬ್ಬರು ಕುದುರೆಗಳನ್ನೇರಿ ಕವಲಪುರದ ಕಡೆಗೆ ನಡೆದಿದ್ದರು. ನಡುದಾರಿಯಲ್ಲಿಯೇ ರಾಜಶೋಧಕ್ಕೆ ನಡೆದಿದ್ದ ಲಿಂಗರಾಜ ಮೊದಲಾದವರನ್ನು ಕಂಡರು.

o o o o

ಲಿಂಗರಾಜನ ಸಮೀಪದಲ್ಲಿ ಜಗನಾಯಕ–ತಿಮ್ಮನಾಯಕರು ತಮ್ಮ ಕುದುರೆಗಳಿಂದ ಇಳಿದು ನಮಸ್ಕರಿಸಿದರು. ಜಗನಾಯಕನೆಂದನು : ‘‘ಸಸೈನ್ಯ ಪ್ರಯಾಣವು ಯಾವ ಕಾರ್ಯಕ್ಕಾಗಿ ?” ಅದಕ್ಕೆ ಉತ್ತರ ಕೊಡುವ ಬದ ಲಾಗಿ ಲಿಂಗರಾಜ, ತಿಮ್ಮನಾಯಕನ ಕಡೆಗೆ ತೀಕ್ಷ್ಣದೃಷ್ಟಿಯಿಂದ ನೋಡು ತ್ತಿದ್ದನು. ಜಗನಾಯಕನು ಆ ಭಾವವನ್ನರಿತುಕೊಂಡು ಹೀಗೆಂದನು :

“ಸೇನಾಪತಿಗಳೇ ಅನುಮಾನಕ್ಕೆ ಕಾರಣವಿಲ್ಲ. ತಾವು ನನ್ನಲ್ಲಿ ಹೇಗೋ ಹಾಗೆ ತಿಮ್ಮನಾಯಕರಲ್ಲಿಯೂ ವಿಶ್ವಾಸವಿಡಬೇಕು. ಅವರು ಮೋಸಹೊಂದಿ, ರಾಜದ್ರೋಹಬಗೆದುದಕ್ಕೆ ತುಂಬಾ ಪಶ್ಚಾತ್ತಾಪ ಪಡುತ್ತಲಿ ದ್ದಾರೆ. ತಮ್ಮ ಹೃದಯವನ್ನು ತೆರೆದು ನನಗೆ ತೋರಿಸಿದ್ದಾರೆ. ಈಗ ಹಸನು ಮನಸ್ಸಿನಿಂದ ಒಡೆಯರ ಕ್ಷಮೆಯನ್ನೂ ಪಡೆಯಲು ಹೊರಟಿದ್ದಾರೆ.”

“ಕೈಮುಗಿದು ತಲೆತಗ್ಗಿಸಿ ನಿಂತ ತಿಮ್ಮನಾಯಕನ ಕಣ್ಣುಗಳಿಂದ ನೀರ ಹನಿಗಳು ನೆಲಕ್ಕೆ ಬೀಳುತ್ತಿದ್ದವು. ಅದನ್ನು ನೋಡುವದರಿಂದ– ಜಗನಾಯ ಕನ ಮಾತಿನಿಂದ–ಲಿಂಗರಾಜನ ಸಂಶಯ ಬದಿಗಾದರೂ ಹೆಚ್ಚು ಮಾತಾಡಲು ಅವನಿಗೆ ಅವಕಾಶವೆಲ್ಲ ? ಸಮಾಧಾನವೆಲ್ಲಿ ? ಆದ್ದರಿಂದ ಜಗನಾಯಕನ ಪ್ರಶ್ನೆಗೆ ಉತ್ತರವಾಗಿ ಪ್ರಸ್ತುತ ಸಂಗತಿಯನ್ನೇ ಮುಂದಿಟ್ಟನು.”

“ದುಷ್ಟರು, ನಮಗೆ ಗೊತ್ತಿಲ್ಲದ ನೆಲಮಾರ್ಗದಿಂದ, ಅರಮನೆಯಲ್ಲಿ ಬಂದು, ಮಲಗಿದಲ್ಲಿಂದಲೇ ವೀರಭದ್ರಪ್ರಭುಗಳನ್ನು ಅಪಹರಿಸಿಕೊಂಡು

ಹೋಗಿದ್ದಾರೆ. ಆ ಮಾರ್ಗದಿಂದ ಬಂದು ನೋಡಿದೆವು. ಅದರ ಎರಡನೆಯ ಬಾಯಿ ಸಮೀಪದ ಕೊಳ್ಳದಲ್ಲಿದೆ. ಈ ವರೆಗೂ ಅವರ ಶೋಧವೇ ಇಲ್ಲ. ಇಲ್ಲಿ ಕಾಡಿನಲ್ಲೆಲ್ಲಿಯೂ ಅವರು ದೊರೆಯದಿದ್ದರೆ, ನಾಳೆಯೇ ಇಕ್ಕೇರಿಯನ್ನು ಮುತ್ತಿ, ದುಷ್ಟರ ಗೂಢವನ್ನು ಬೈಲುಗೊಳಿಸಿ ದೊರೆಗಳನ್ನು ಕಾಣಬೇಕೆಂದು ನಿಶ್ಚಯ ಮಾಡಿದ್ದೇವೆ."

ಜಗನಾಯಕನು ಗಾಬರಿಯಾದನು. ಕಾತರದಿಂದ ತಿಮ್ಮನಾಯಕನ ಕಡೆಗೆ ನೋಡಿದನು.

"ಸೇನಾಪತಿಗಳೆ, ಕಾರಸ್ಥಾನವನ್ನು ನಾನು ಅರಿಯುವೆನು. ಆ ನೀಚರು ರಾಜರನ್ನು ಒಯ್ದು ಇಟ್ಟಿರಬಹುದಾದ ಸ್ಥಳವೂ ನನಗೆ ಗೊತ್ತಿದೆ. ನನ್ನ ಕೈಗಳಿಗೆ ಕೊಳಹಾಕಿ ನನ್ನನ್ನು ತೆಗೆದುಕೊಂಡು ನಡೆಯಿರಿ; ಅರಸರಿರಬಹುದಾದ ಸ್ಥಳವನ್ನು ತೋರಿಸುತ್ತೇನೆ"

ಎನ್ನುತ್ತ ತಿಮ್ಮನಾಯಕನು ಲಿಂಗರಸನ ಕುದುರೆಯ ಮುಂದೆ ಸಾಷ್ಟಾಂಗವಾಗಿ ಎರಗಿದನು. ಲಿಂಗರಸನು ಕೆಳಗಿಳಿದು ಬಂದು ಆತನನ್ನು ಎಬ್ಬಿಸಿದನು.

"ತಿಮ್ಮನಾಯಕರೆ, ನಿಮ್ಮ ವಿಷಯದಲ್ಲಿ ಇನ್ನು ನನಗೆ ಅವಿಶ್ವಾಸವಿಲ್ಲ. ಪ್ರಭುಗಳ ಶೋಧಕ್ಕೆ ನೀವು ನೆರವಾಗಬೇಕೆಂದೇ ನನ್ನಿಚ್ಛೆ!"

"ನಾವೆಲ್ಲರೂ ಕೂಡಿ ಆ ಸ್ಥಳವನ್ನೇ ನಮ್ಮ ಅಧೀನದಲ್ಲಿ ತೆಗೆದುಕೊಳ್ಳೋಣ! ಆ ಸ್ಥಳವನ್ನು ನಾನು ಬಲ್ಲೆನು. ಮೊದಲು ನನ್ನ ಕೈಕೆಳಗಿದ್ದ ಜನರೇ ಈಗ ಅಲ್ಲಿರಬಹುದು. ಈಗಲೇ ಹೊರಟರೆ ತಾಸೆರಡುತಾಸು ರಾತ್ರಿಯ ಸಮಯಕ್ಕೆ ಅಲ್ಲಿಗೆ ಮುಟ್ಟಬಹುದು."

"ನಾವು ನಿಮ್ಮನ್ನು ಅನುಸರಿಸಲು ಸಿದ್ಧರೇ ಇದ್ದೇವೆ. ನೀವು ಕುದುರೆಯನ್ನು ಹತ್ತಿರಿ. ಪ್ರಭುಗಳ ರಕ್ಷಣೆಯು ನಮ್ಮೆಲ್ಲರ ಕರ್ತವ್ಯವು!"

ತಿಮ್ಮನಾಯಕನು ತತ್‌ಕ್ಷಣ ಕುದುರೆಯ ಮೇಲೆ ಕುಳಿತು ದಕ್ಷಿಣಾಭಿಮುಖವಾಗಿ ನಡೆದನು. ಲಿಂಗರಾಜನೂ, ಜಗನಾಯಕನೂ, ಇನ್ನೂರು ಜನ ರಾಹುತರೂ ಅವನನ್ನು ಅನುಸರಿಸಿದರು. ಅವರೆಲ್ಲರು ಕಣಿವೆ ದಿನ್ನೆಗಳನ್ನು ದಾಟುತ್ತ ಅರಣ್ಯಮಾರ್ಗದಲ್ಲಿ ಭರದಿಂದ ಸಾಗಿದರು ಆ ಸ್ವಾಮಿಷ್ಠರು

ತಮ್ಮೊಡೆಯನನ್ನು ಯಾವಾಗ ಕಂಡು ಆತನ ಸಂಕಟ ಪರಿಹರಿಸುವೆವೋ ಎಂದು ಆತುರರಾಗಿದ್ದರು.

0 0 0 0

ಹಿಂದೆ ಹೇಳಿದ ನೆಲಮಾರ್ಗವು ಪ್ರಾಚೀನ ಕಾಲದ್ದು! ಕದಂಬ ರಾಜ್ಯದ ಕಾಲಕ್ಕೆ ಕವಲಪುರದ ಕೋಟೆಯು ಒಳ್ಳೆ ಪ್ರಸಿದ್ಧಿಯನ್ನು ಪಡೆದಿತ್ತು. ಆ ಕಾಲದ ಅರಮನೆಯಿಂದ ಕೋಟೆಯ ಹೊರಗೆ ಹೋಗಲಿಕ್ಕೆ ಮಾಡಿದ ಗುಪ್ತಮಾರ್ಗವೇ ಆ ನೆಲಮಾರ್ಗವು. ಮಧ್ಯಕಾಲದಲ್ಲಿ ಆ ಕೋಟೆಯ ಮಹತ್ವವು ಕಡಿಮೆಯಾದಾಗ ಆ ಮಾರ್ಗದ ಬಳಕೆಯಿಲ್ಲದೆ ಮರೆತು ಹೋಗಿತ್ತು. ಇಕ್ಕೇರಿಯ ಅರಸರ ಕಾಲಕ್ಕೆ ಅದು ಯಾರಿಗೂ ಗೊತ್ತಿರಲಿಲ್ಲ. ಬೇಡರ ಒಡೆಯನಾದ ಮುತ್ತನಿಗೆ ಅಕಸ್ಮಾತ್ತಾಗಿ ಅದರ ಶೋಧವಾಗಿತ್ತು. ಅದು ಕವಲಪುರದ ಅರಮನೆಯಲ್ಲಿಯೇ ಪಾರಾಗುವದೆಂಬದನ್ನು ಅದರ ಬಾಯಿಗೆ ಗುರ್ತಸಿಗದ ಒಂದು ಮುಳ್ಳಿನ ಇರುವದೆಂಬದನ್ನೂ ಅವನು ಗೊತ್ತುಹಚ್ಚಿದನು. ಗೂಢವಾದುದೊಂದು ಸಂಗತಿ ಗೊತ್ತಾದರೆ, ಅದು ತಮ್ಮ ಪ್ರತಿಷ್ಠೆಗೆ ಉಪಯೋಗವಾಗಲು ಇರಲೆಂದು ಅದನ್ನು ಯಾರಿಗೂ ಹೇಳದಿರುವದು ಆಗಿನವರ ಸ್ವಭಾವವಾಗಿತ್ತು. ಹಾಗೆಯೇ ಮುತ್ತನು ಅದನ್ನು ಬೈಲಿಗೆ ಹಾಕದಿರುವದರಿಂದ ಯಾರೂ ಅರಿಯರು. ವೀರಭದ್ರನೂ ಅರಿಯನು; ಅವನ ಪರಿವಾರವೂ ಅರಿಯದು.

ಮುತ್ತನು ತಿಮ್ಮನಾಯಕನಿಂದ ಕೂಡಿಸಲ್ಪಟ್ಟ ಬೇಡರ ಸಮೂಹಕ್ಕೆ ಆತನ ತರುವಾಯ ಅಧಿಪತಿಯಾಗಿದ್ದನು. ಚೆನ್ನಮ್ಮನನ್ನೂ ಆಕೆಯ ಅಕ್ಕನ ಕೂಸನ್ನೂ ಆತನೇ ತನ್ನ ಜನರೊಡನೆ ಕಾಯುತ್ತಿದ್ದನು. ಮುತ್ತನಾದರೂ ಬೇಡನೇ! ಉಳಿದವರಿಗಿಂತ ವೀರನೂ ಚತುರನೂ ಆಗಿದ್ದನು. ಮುಂದೆ ಮುತ್ತನಲ್ಲಿ ಸದಾಶಿವನ ವಿಶ್ವಾಸವು ಹೆಚ್ಚಾಗುತ್ತ ನಡೆಯಿತು. ಮುತ್ತನು ಸದಾಶಿವನ ಏಕನಿಷ್ಠ ಸೇವಕನಾದನು. ಆತನು ಸದಾಶಿವನ ಸೂಚನೆಯಂತೆ ಚೆನ್ನಮ್ಮನನ್ನು ಹೆಚ್ಚು ಹೆಚ್ಚು ಸ್ವತಂತ್ರಳನ್ನಾಗಿ ಮಾಡಿ, ಸವಿಮಾತಿನಿಂದ ಆಕೆಯ ಸರ್ವವೃತ್ತಾಂತವನ್ನೂ ಕೇಳಿಕೊಂಡು ಸದಾಶಿವನಿಗೆ ತಿಳಿಸಿದನು; ಕೂಸನ್ನು ಅವನ ವಶ ಮಾಡಿದನು. ಮುಂದೆ ಸದಾಶಿವನು ಹಚ್ಚಿದ ಕವಲಪುರದ ದುರ್ಗಾಧಿಕಾರಿಯಾಗುವ ಆಸೆಯಿಂದ ಮುತ್ತನು ವೀರಭದ್ರರಾಜನನ್ನು ಸೆರೆಹಿಡಿದು ಕೊಡುವೆನೆಂದು ಆತನಿಗೆ ವಚನ ಕೊಟ್ಟನು.

ಅವರಂತೆ ಮುತ್ತನು ಹತ್ತು ಜನ ಕಾಡುಜನರೊಡನೆ ಮಧ್ಯರಾತ್ರಿಯಲ್ಲಿ ತನಗೆ ಗೊತ್ತಿದ್ದ ಗುಪ್ತಮಾರ್ಗದಿಂದ ಕವಲಪುರದ ಅರಮನೆಯನ್ನು ಸೇರಿದನು. ಆ ಮಾರ್ಗದ ಬಾಗಿಲವಿರುವ ಕೋಣೆಯೇ ಅರಸನ ಶಯನಗೃಹವಾದ್ದರಿಂದ ಅನಾಯಾಸವಾಗಿ ಅರಸನು ಅವರ ಕೈಗೆ ಸಿಕ್ಕನು. ಅವರು ಮೇಲೆ ಬಂದು ಒಮ್ಮೆಲೇ ಅರಸನ ಕೈ ಬಾಯಿಗಳನ್ನೂ ಒತ್ತಿ ಹಿಡಿದು ಕಟ್ಟಿ ಅದೇ ಮಾರ್ಗವಾಗಿ ಹೊತ್ತುಕೊಂಡು ಹೋದರು. ಅವನನ್ನೂ ತಮ್ಮ ಗುಪ್ತಗವಿಯಲ್ಲಿಟ್ಟರು. ಆ ಸ್ಥಳವು ಎದುರಾಳಿಗಳಿಗೆ ಗೊತ್ತೇ ಇರಲಿಲ್ಲ. ಆದಾಗ್ಯೂ ಮುತ್ತನು ತನ್ನ ಜನರಿಗೆ ಕಾವಲು ಮಾಡ ಹೇಳಿ, ಈ ಆನಂದದ ಸುದ್ದಿಯನ್ನು ಸದಾಶಿವನಿಗೆ ತಿಳಿಸಲು ಇಕ್ಕೇರಿಗೆ ಹೋಗಿದ್ದನು.

ಗವಿಯು ವಿಸ್ತಾರವಾದದ್ದಿತ್ತು. ಒಳಗೆ ಬೇರೆ ಬೇರೆ ನಾಲ್ಕೈದು ಭಾಗಗಳಿದ್ದವು ಗವಿಯ ಬಾಗಿಲವು ಬಹಳ ಸಣ್ಣದಿತ್ತು. ಒಂದು ದೊಡ್ಡ ಕೊಳ್ಳದಲ್ಲಿ ಸುತ್ತು ಸುತ್ತಾಗಿ ಇಳಿದು ಆ ಬಾಗಿಲಿಗೆ ಬರುವ ದಾರಿಯಿತ್ತು. ಗವಿಯೊಳಗಿನ ಒಂದು ಬೆಳಕಿಲ್ಲದ ಕೋಣೆಯಲ್ಲಿ ವೀರಭದ್ರನಾಯಕನನ್ನು ಹಾಕಿದ್ದರು. ಆತನು ತನ್ನ ದುರ್ದೆಶೆಯನ್ನು ನೆನಿಸುತ್ತ ಒಂದು ಚಾಪೆಯ ಮೇಲೆ ಹೊರಳಾಡುತ್ತಿದ್ದನು. ಚೆನ್ನಮ್ಮ ಸೆರೆಯಾಗಿದ್ದುದೂ ಇದೇ ಗವಿಯಲ್ಲಿ! ಒಮ್ಮೆ ಸದಾಶಿವನು ಬಂದು ಅವಳನ್ನು ನೋಡಿ ಭ್ರಾಂತನಾದ್ದರಿಂದಲೋ ಏನೋ ಅವಳಿಗೆ ಹೆಚ್ಚು ಸ್ವಾತಂತ್ರ್ಯವಿರುವಂತೆಯೂ ಅವಳ ಸಮೀಪಕ್ಕೆ ಯಾರೂ ಹೋಗದಂತೆಯೂ ಆಜ್ಞೆಮಾಡಿದ್ದನು. ಆದ್ದರಿಂದ ಅವಳು ಗವಿಯ ತುಂಬ ಅಡ್ಡಾಡುವಳು. ವೀರಭದ್ರರಾಜನನ್ನು ಅಪಹರಿಸಿ ತಂದು ಹಾಕಿದುದೂ ಅವಳಿಗೆ ಗೊತ್ತಾಗಿತ್ತು. ತನ್ನ ತಂದೆಯು ತನ್ನನ್ನು ವೀರಭದ್ರರಾಜನಿಗೆ ಧಾರೆಯೆರೆದು ಕೊಡುವ ವಿಚಾರ ನಡೆಯಿಸಿದ್ದರು. ಅವರೇ ತನ್ನನ್ನು ಬಂಧುಗಾರರಿಂದ ಬಿಡಿಸಿದ್ದರು. ಅವರನ್ನು ತಾನು ಪ್ರತ್ಯಕ್ಷ ಕಂಡು ಒಲಿದಿದ್ದಳು. ಈಗ ಆ ವೀರಭದ್ರರಾಜರೇ ಇಲ್ಲಿ ಬಂಧಿತರಾಗಿದ್ದಾರೆ. ತಾನೂ ಬಂದಿ! ದೈವಲೀಲೆ! ಇದು ಅವಳ ಕಾತರವನ್ನು ಹೆಚ್ಚಿಸಿತು.

ಹೊತ್ತು ಮುಳುಗಿ ಕತ್ತಲಾಗಿ ಕಾಡಿನವರು ಅಜಾಗ್ರತರಾಗಿರುವ ವೇಳೆ! ಅವರೆಲ್ಲ ಗವಿಯ ಬಾಗಿಲಲ್ಲಿ ಒಟ್ಟುಗೂಡಿ ಹರಟೆಗೊಚ್ಚುತ್ತ ಕುಳಿತಿದ್ದರು. ಈ ಸಮಯವೇ ಅನುಕೂಲವಾದುದೆಂದು ಚೆನ್ನಮ್ಮನು ಉಂ

ಯುವ ಕಕ್ಕಡವನ್ನು ಕೈಯಲ್ಲಿ ಹಿಡಿದುಕೊಂಡು ವೀರಭದ್ರರಾಜನಿರುವ ಕೋಣೆಗೆ ಬಂದಳು. ಆತನನ್ನು ನೋಡಿ ನಿಡುಸುಯ್ದು ಎಂದಳು :

"ಪರರ ಆಪತ್ತನ್ನು ಪರಿಹರಿಸುವ ಪ್ರಭುಗಳಿಗೆ ಈ ವಿಪತ್ತು ಬಂದೊದಗಿತೇ ?"

ವೀರಭದ್ರನು ವಿಸ್ಮಿತನಾದನು; ಆಗಲೇ ಅವಳನ್ನು ಗುರ್ತಿಸಿದನು.

"ಅಯ್ಯೋ ಅದೇ ಮಹನೀಯಳು! ನೀನು ಇಲ್ಲಿ ಸೆರೆಯಾಗಿರುವೆಯಾ? ಅಂದು ನನ್ನ ಸಂರಕ್ಷಣೆಯನ್ನು ನಂಬಿದ ನಿನ್ನನ್ನು ನಿನ್ನ ತಂದೆಯ ಕಡೆಗೆ ಕಳಿಸುವದಾಗಲಿಲ್ಲ ನನ್ನಿಂದ! ನನ್ನಂಥ ಕೃತಘ್ನನಿರುವನೇ ? ಅದರ ಪ್ರಾಯಶ್ಚಿತ್ತವೇ ಇದು. ನಾನೇ ಬಂಧಿತನಾಗಿ ನೀನಿರುವಲ್ಲಿಗೇ ಬಂದಿರುವೆನು."

ಚೆನ್ನಮ್ಮ ಕಕ್ಕಡವನ್ನು ಅಲ್ಲಿಯ ಕಲ್ಲ ಮೇಲಿಟ್ಟು, ಉಕ್ಕಿಬರುವ ಕಣ್ಣೀರನ್ನು ಸೆರಗಿನಿಂದ ಒರಿಸಿಕೊಳ್ಳುತ್ತ ಬಿಗಿದ ಕಂಠದಿಂದೆಂಳು :

"ಒಡೆಯರು ತಾವು ಹೀಗೆಲ್ಲ ಕಳವಳಪಡಲಾಗದು ನಾನಿಂದು ಸೆರೆಯಾಗಿದ್ದರೂ ಅಂದಿನ ತಮ್ಮ ದರ್ಶನದ ಧೈರ್ಯದಿಂದಲೇ ದಿನಗಳನ್ನು ಕಳೆಯುತ್ತಿದ್ದೇನೆ. ಇನ್ನು ತಮ್ಮೆಡೆಯಲ್ಲಿ ನನಗೆ ಭಯವೇನು ?"

"ಹಿಂದೊಮ್ಮೆ ಹೀಗೆ ನಂಬಿ ವಂಚಿತಳಾಗಿರುವೆ. ನಾನೇ ಹತಬಲನಾಗಿ ಅನವಸ್ಥೆಯಲ್ಲಿರುವಾಗ ಮತ್ತೆ ನನ್ನನ್ನೇ ನಂಬುವದೇ ?"

"ಹೇಗಿದ್ದರೂ ತಾವು ನನ್ನ ಪಾಲಿಗೆ ಸಾವಿರ ಮಡಿ ಬಲಶಾಲಿಗಳಾಗಿಯೇ ಇರುವಿರಿ."

"ಆದರೇನು ? ಅಂದು ನನ್ನಿಂದ ನಿನ್ನನ್ನು ನಿನ್ನ ಬಳಗದೊಡಗೂಡಿಸುವದಾಗಲಿಲ್ಲ. ನಿನ್ನ ತಂದೆ ತಾಯಿಗಳು ಯಾರೆಂಬುದನ್ನು ಆಗ ತಿಳಿಯಲಾಗಲಿಲ್ಲ. ನಿಮ್ಮನ್ನು ಕಳೆದುಕೊಂಡು ಅವರು ಅದೆಷ್ಟೋ ದುಃಖಿಸುತ್ತಿರಬೇಕು."

"ಕೊಲ್ಲೂರು ರುದ್ರೇಶ್ವರರು ನನ್ನ ತಂದೆ ಒಡೆಯರೆ, ಅವರು ತಮ್ಮ ಮಮತೆಯ ಹೆಣ್ಣು ಮಕ್ಕಳ ಸಲುವಾಗಿ ಎಷ್ಟು ದುಃಖಿಸುತ್ತಿರಬಹುದೆಂಬುದನ್ನು ಹೇಳಲಾದೀತೇ ?....(ಅಳುವು)...."

"ರುದ್ರೇಶ್ವರರ ಮಕ್ಕಳೇ ನೀವು ? ಸಜ್ಜನರಾದ ಅವರಿಗೆ ಈಶ್ವರನು ಈ ನೋವನ್ನೇಕೆ ಮಾಡಿದನು ?....ವಿಧಿಯ ಕ್ರೌರ್ಯವೆಷ್ಟು ?... ಆತ್ಮಹತ್ಯ ಮಾಡಿಕೊಂಡ ನಿಮ್ಮಕ್ಕನು ಘಂಟೆಯೊಡೆಯರ ಪತ್ನಿ ?"

"ಹೌದು"

"ಆ ಮಗುವೆಲ್ಲಿ ?"

"ಅದೂ ನನ್ನನ್ನಗಲಿತು; ಮೊನ್ನೆ ಇಕ್ಕೇರಿಗೆ ಒಯ್ದಿದ್ದಾರಂತೆ."

"ಅಯ್ಯೋ ಏನು ಅನರ್ಥವಿದು, ಅವರ ಉದ್ದೇಶವಾದರೂ ಏನು ?"

ಇಬ್ಬರೂ ಕಂಬನಿದುಂಬಿದರು. ಮತ್ತೆ ಮತ್ತೆ ಉಸುರ್ಗರೆದರು. ಕಳವಳದಲ್ಲಿ ಕೆಲ ಹೊತ್ತು ಕಳೆಯಿತು. ಇಬ್ಬರೂ ಮಾತಾಡದಾದರು. ಆ ಮೌನವೇ ನೊಂದ ಅವರ ಅಂತರಂಗಕ್ಕೆ ಸ್ವಲ್ಪ ಶಾಂತಿಯನ್ನಿತ್ತಿತು, ಕಣ್ಣೊರಿಸಿಕೊಂಡರು. ಹೆಚ್ಚಾಗಿ ಹೊತ್ತಿ ಉರಿಯುಹತ್ತಿದ ಕಕ್ಕಡದಿಂದ ಬೆಳಕು ನಿಚ್ಚಳವಾಯಿತು. ಸುತ್ತಲೆಲ್ಲ ಕತ್ತಲೆ ಕವಿದಿದ್ದರೂ ಒಳಗೆ ಬೆಳಕು ! ಅದಕ್ಕೆ ಆ ಕತ್ತಲೆಯ ಭಯುವೇ ? ಅದುವೇ ಆ ಪನ್ನಿವಾರಣೆಗೆ ಆಧಾರವು ! ಬೆಳಕು ಬಿದ್ದ ಹೃದಯುಗಳಲ್ಲಿ ಭಯಕ್ಕೆ ಸ್ಥಳವಿಲ್ಲ; ದುಃಖದ ನೆನಹಿಲ್ಲ. ಉನ್ನತಿಯ ಮಾರ್ಗವು ಒಡೆದು ಮೂಡುವದು. ಅವರಿಬ್ಬರ ಬಗೆ ತುಂಬಿ ಬಂದರೂ ಬಾಯಿಗೆ ಮಾತು ಬಾರದು. ಬಾರದ ಮಾತಿಗೆ ಆತುರರಾಗಿದ್ದರು. ವೀರಭದ್ರನಾಯಕನ ಒಳಬಗೆ ಹೊರಗೆ ನೆಗೆಯಿತು. ಆತನು ಕಣ್ಣೆತ್ತಿ ಚೆನ್ನಮ್ಮನ ಮುಖವನ್ನು ನೋಡಿದನು. ಅದಕ್ಕಿದಿರಾದ ಚೆನ್ನಮ್ಮನ ದೃಷ್ಟಿ ಹಿಂದೆ ಸರಿಯಿತು. ಇನ್ನು ಸುಮ್ಮನಿರುವದು ಸರಿಯಾಗದೆಂದು ರಾಜನೇ ಮಾತಿಗೆ ಮೊದಲು ಮಾಡಿದನು :

"ರುದ್ರೇಶ್ವರರ ಆ....ಪುತ್ರಿಯೋ ನೀನು ?"

"ಅಹುದು"

ವೀರಭವ್ರರಾಜನ ಮುಂದಸ್ಮಿತ ಮೊಗದ ಆಸೆಯ ನೋಟವೂ, ಚೆನ್ನಮ್ಮನ ಹೊಳಹು ಮೊಗದಿಂದಲೂ ಹೊರಳಿಬಂದ ಪ್ರೇಮುಲ ನೋಟವೂ ಮತ್ತೆ ಒಂದುಗೂಡಿ ಒಳಬಗೆಯುಲ್ಲಿ ಅಡಗಿದವು.

"ರುದ್ರೇಶ್ವರರ ಬಿನ್ನಹವು ನನ್ನ ಕಡೆಗೆ ಬಂದಿತ್ತು."

"ಆ ಬಿನ್ನಹಕ್ಕೆ ಮನ್ನಣೆಯು ದೊರೆಯುವ ಹಾದಿಯನ್ನೇ ನೋಡುತ್ತಲಿದ್ದರು."

"ಅದಕ್ಕೆ ಅವಕಾಶವು ಅವಶ್ಯವಾಗಿದ್ದಿತು."

"ಆ ಅವಕಾಶದ ಒಡಲಿನಲ್ಲಿಯೇ ದುರ್ವಿಧಿಯು ಈ ಎಲ್ಲ ಆಟಗಳು ನಡೆಯಬೇಕಾಗಿತ್ತೇನೋ ?"

"ಈಶ ಸಂಕಲ್ಪ ಯಾರೇನು ಮಾಡುವದು ?"

"ನನ್ನ ತಂದೆಯ ಒಂದು ಬಯಕೆಯನ್ನು ಈಡೇರಿಸುವದೂ ಈಶ್ವರ ಸಂಕಲ್ಪವಿರಬೇಕು. ಅದಿಲ್ಲದಿದ್ದರೆ ವಿಪತ್ತುಗಳ ನೆವದಿಂದಲಾದರೂ ಈ ಪೂಜ್ಯ ಪಾದಗಳನ್ನು ಮತ್ತೆ ಮತ್ತೆ ನನಗೆ ಕಾಣಿಸುತ್ತಿದ್ದನೇಕೆ ? ಅದರಿಂದ ನನ್ನ ಬೆಂದ ಬಗೆಗೆ ಸಂತಸವನ್ನೀಯುತ್ತಿದ್ದನೇಕೆ ? ನಾನೇನೋ ನಿಶ್ಚಯ ಮಾಡಿ ಬಿಟ್ಟಿದ್ದೇನೆ. ಪ್ರಭುಗಳ ಚಿತ್ತ ಹೇಗಿದೆಯೋ ?"

"ನನ್ನ ಚಿತ್ತ !! ಅಂದು ನಿನ್ನಲ್ಲಿ ಉಳಿದ ನನ್ನ ಚಿತ್ತವನ್ನು ನಾನು ಇಂದಿಗೂ ಅರಿಯದಿರುವೆನು. ನಿನಗಾಗಿ ನನ್ನ ಸೈನ್ಯವು ಹೊರಗೆ ಸುತ್ತುತ್ತಿದೆ. ನನ್ನ ಮನವು ಒಳಗೆ ಸುತ್ತುತ್ತಿದೆ. ಅಂದಿನ ನಿನ್ನ ದೈನ್ಯಾವಸ್ಥೆಯೊಂದೇ ಅಲ್ಲದೆ, ಸಹಜವಾಗಿರುವ ನಿನ್ನ ಸೌಂದರ್ಯವೂ ನಿನ್ನ ಒಲುಮೆಯೂ ಅದಕ್ಕೆ ಕಾರಣವಾಗಿವೆ. ಸದಾಶಿವನ ಮೋಸದ ಶೂಲದಲ್ಲಿ ಈಗ ಗತಿಗೆಟ್ಟು ಕತ್ತಲಗವಿದ ನನ್ನೆದೆಯಲ್ಲಿ ನಿನ್ನಿಂದಲೇ ಒಂದು ಬೆಳಕು ಕಾಣುತಿದೆ; ಇದುವೇ ನನ್ನ ಚಿತ್ತ !!"

"ಹಾಗಾದರೆ ನಾನು ಧನ್ಯಳೆಂದೇ ಭಾವಿಸುತ್ತೇನೆ."

ಆತನ ಪಾದದಲ್ಲಿ ತಲೆಯನ್ನಿಟ್ಟಳು. ಪಾದಧೂಳಿಯನ್ನು ಮುಡಿಯಲ್ಲಿ ಧರಿಸಿದಳು. ಆತನು ತಲೆ ಹಿಡಿದೆಬ್ಬಿಸಿದನು.

"ಚೆನ್ನಾಗಿ ಕುಳ್ಳಿರು. ನಿನ್ನ ಈ ಪ್ರೇಮವೇನು ? ನಿಶ್ಯಸ್ತ್ರನಾದ ನನ್ನ ಸ್ಥಿತಿಯೇನು ? ನಮಗಾವ ಗತಿಯೋ ನಾಕಾಣೆ !"

"ಸತ್ಯಪ್ರೇಮದಲ್ಲಿ ಶಿವನಿರುತ್ತಾನೆಂದು ಹೇಳುತ್ತಾರೆ ದೊರೆಗಳೆ. ಈ ಘಟನೆಗಳಿಂದ ನನಗೆ ನಂಬಿಗೆಯಾಗುತ್ತದೆ. 'ಧರ್ಮವೇ ನಮ್ಮನ್ನು ಕಾಪಾಡುವದು' ಎಂದು. ಈ ಬೇಡರಿಂದ ನನಗೆ ನಿರ್ಬಂಧವು ಕಡಿಮೆ ! ಇಬ್ಬರು ಹೆಂಗಳೆಯರ ಹೊರತು ನನ್ನ ಹತ್ತಿರ ಯಾರೂ ಬರುತ್ತಿರುವದಿಲ್ಲ. ಹಾಗೆ ಸದಾಸಿವನ ಕಟ್ಟಾಜ್ಞೆಯಂತೆ ! ಆದರಿಂದ ಇದುವರೆಗೆ ನನ್ನ ಮಾನರಕ್ಷಣೆಯಾಗಿದೆ; ಅವನ ದುರುದ್ದೇಶ ಏನೇ ಇರಬಹುದು !"

"ಹೇಗಿದ್ದರೂ ನಿನ್ನ ಮಾನವನ್ನು ನೀನೇ ರಕ್ಷಿಸಿಕೊಳ್ಳುತ್ತಿದ್ದೆ. ರುದ್ರೇಶ್ವರರು ಮಾನಧನರು! ಮಾನರಕ್ಷಣೆಗಾಗಿಯೇ ಪವಿತ್ರಾತ್ಮಳಾದ ನಿಮ್ಮಕ್ಕ ಅಸುದೊರೆದಳು. ಸಂದೇಹವೇ ಇಲ್ಲ."

"ಇನ್ನು ಅವನಿಂದ ಭಯವೇ ಇಲ್ಲ. ಏನಾದರೂ ಹಂಚಿಕೆ ಹಾಕೋಣ; ಇಲ್ಲಿಂದ ಪಾರಾಗೋಣ!"

'ಶ್ರೀ ಸರ್ವೇಶ್ವರ ಕೃಪಾನ್ವಿತ, ಚೌಡಕುಲಲಲಾಮ, ಕೆಳದೀನೃಪೋತ್ತಮ, ಶ್ರೀ ವೀರಭದ್ರರಾಜ ಪರಾಕು! ಇಕ್ಕೇರೀ ಪುರವರಾಧೀಶ್ವರ ಪರಾಕು!!'

ಈ ಘೋಷಣೆ ಕೇಳಿ ವೀರಭದ್ರನಾಯಕನು ಬಾಗಿಲ ಕಡೆಗೆ ಹೊರಳಿ ನೋಡಿದನು.

"ಪ್ರಭುಗಳಿಗೆ ಜಯವಾಗಲಿ" ಲಿಂಗರಸು ಜಗನಾಯಕರು ನೆಲಮುಟ್ಟಿ ನಮಸ್ಕರಿಸಿದರು. ಹಂಜು ಹಿಡಿದು ನಿಂತ ಭಟರ ನಡುವಿನಿಂದ ತಿಮ್ಮನಾಯಕನು ಕೈಕಟ್ಟಿಕೊಂಡು ಮುಂದೆ ಬಂದು ರಾಜನ ಪಾದದ ಮೇಲೆ ತಲೆಯನ್ನಿಟ್ಟನು."

"ಒಡೆಯರು ನನ್ನ ಸರ್ವಾಪರಾಧಗಳನ್ನು ಕ್ಷಮಿಸಬೇಕು."

ಅರಸನಿಗೆ ಅಚ್ಚರಿ, ಆನಂದ, ಕುತೂಹಲ:

"ಲಿಂಗಣ್ಣ–ಜಗಣ್ಣ, ಈತನು ನಮ್ಮ ಕಡು ಹಗೆ; ತಿಮ್ಮನಲ್ಲವೇ?"

"ಒಡೆಯರೆ, ತಿಮ್ಮನಾಯಕನು ಹೌದು. ಆದರೆ ಈತನು ಈಗ ನಮ್ಮ ಹಗೆಯಲ್ಲ! ತಮ್ಮ ಪಾದಸೇವಕನು, ನಮ್ಮ ಮಿತ್ರನು!

"ಒಡೆಯರೆ, ತಿಮ್ಮನಾಯಕರ ಸಹಾಯದಿಂದಲೇ ನಾವೀಗ ತಮ್ಮನ್ನು ಕಂಡೆವು; ಇಲ್ಲಿಯ ಜನರನ್ನು ಸೆರೆಹಿಡಿದೆವು. ತಿಮ್ಮನಾಯಕರು ಮನಃಪೂರ್ವಕವಾಗಿ ತಮ್ಮ ಸೇವೆಮಾಡಲು ಪ್ರತಿಜ್ಞಾಬದ್ಧರಾಗಿದ್ದಾರೆ."

ಮುಂಡೆಯೂರಿ ಪಾದ ಹಿಡಿದು ಕುಳಿತಿದ್ದ ತಿಮ್ಮನಾಯಕನನ್ನು ವೀರಭದ್ರರಾಜನು ಎಬ್ಬಿಸಿದನು. ಆತನು ತಲೆವಾಗಿ ಕೈಮುಗಿದು ನಿಂತನು. ಅವನು ಮೋಸಕ್ಕೆ ಸಿಲುಕಿ ದ್ರೋಹ ಬಗೆದುದನ್ನೂ, ಮುಂದೆ ಸತ್ಯವನ್ನರಿತುದನ್ನೂ, ಪಶ್ಚಾತ್ತಾಪಪಟ್ಟು ಸ್ವಾಮಿಹಿತಕ್ಕೆ ತವಕಿಸುತ್ತಿರುವುದನ್ನೂ, ಈಗ ನಡೆದುದನ್ನೂ ಜಗನಾಯಕನು ಸ್ವಲ್ಪದರಲ್ಲಿ ವಿವರಿಸಿದನು. ಸತ್ಯದ ಗೆಲುವಿನ ಸುದ್ದಿ! ಚೆನ್ನಮ್ಮ ಇದೀಗ ನುಡಿದಿದ್ದಳು. 'ಧರ್ಮವೇ ನಮ್ಮನ್ನು

ಕಾಪಾಡುವದು’ ಎಂದು. ತಿಮ್ಮನಾಯಕನ ಕತೆಯಿಂದ ಅರಸನಿಗೆ ದಿಗಿಲಾಗಿ ಅವನ ವೈನವಿರೇಳುತ್ತಿದ್ದವು. ಬಳಿಕ ಎಂದನು: “ತಿಮ್ಮನಾಯಕರೆ, ನಿಮ್ಮನ್ನು ತುಂಬಾ ಕ್ಷಮಿಸಿದ್ದೇನೆ. ನೀವೆಲ್ಲರು ಇಕ್ಕೇರಿಯ ರಾಜ್ಯದ ಆಧಾರ ಸ್ತಂಭರು. ನೀವೇ ಹೊಯ್ದಾಡಿದರೆ ಅದು ಕುಸಿದು ಬೀಳುವಲ್ಲಿ ಸಂದೇಹ ವೇನು? ನೀವು ಈಗ ಸತ್ಯವನ್ನರಿತು ಮತ್ತೆ ರಾಜ್ಯಭಾರಕ್ಕೆ ಸಿದ್ಧರಾದುದರಿಂದ ನನಗೊಳ್ಳೆ ಆನಂದ! ರಾಜ್ಯಹಿತದ ಭಾರವು ನಿಮ್ಮೆಲ್ಲರ ಮೇಲೆಯೇ ಅಲ್ಲವೇ? ಇಂದಿನಿಂದ ನೀವು ನಿಮ್ಮ ಮೊದಲಿನ ಅಧಿಕಾರಸ್ಥಳದಲ್ಲಿ ನಿಯೋಜಿತರಾದಿರಿ.”

ತಿಮ್ಮನಾಯಕ ಮತ್ತೆ ವಂದಿಸಿದನು.

ಜಗನಾಯಕನು ಮುಂದೆ ನೋಡಿ ಅಂದನು: “ಒಡೆಯರೆ, ಅಂದು ಉಂಟಾದ ತಮ್ಮ ಮನದ ನೋವು ತೊಲಗುವಂತೆ ಈ ಅಮ್ಮನ ಶೋಧವೂ ಆಗಿದೆಯಲ್ಲ!”

“ಅಹುದು, ಅಂದು ಇವಳು ಯಾರೆಂಬುದು ಕೂಡ ಗೊತ್ತಾಗಲಿಲ್ಲ. ಇವಳು ಕೊಲ್ಲೂರ ರುದ್ರೇಶ್ವರರ ಪುತ್ರಿಯು.”

“ಅಬ್ಬಾ ಹೀಗೇನು ಪ್ರಭು?” ಆತುರದಿಂದ ಲಿಂಗರಾಜನು ನುಡಿದನು. ಆ ಮೂವರೂ ರಾಜಮನೆತನದವರಿಗೆ ಸಲ್ಲುವ ವಂದನೆಗಳನ್ನು ಆಕೆಗೆ ಸಲ್ಲಿಸಿದರು. ಚನ್ನಮ್ಮ ಬೆಪ್ಪಾಗಿದ್ದಳು.

‘ಇನ್ನು ನಾವು ಇಲ್ಲಿಂದ ಹೊರಡೋಣ’ ಎನ್ನುತ್ತ ಅರಸನು ಚೆನ್ನಮ್ಮನ ಮುಖ ನೋಡಿದನು. ಆಕೆಯು ಆದರದಿಂದ ತಲೆಯನ್ನಲ್ಲಾಡಿಸಿ ಒಪ್ಪಿಗೆ ಯನ್ನಿತ್ತಳು. ಅವರೆಲ್ಲರೂ ಗವಿಯ ಬಾಗಿಲಿಗೆ ಬಂದರು. ಪಂಜುಗಳಿಂದ ಆ ಕೊಳ್ಳದಲ್ಲೆಲ್ಲ ಬೆಳಕಾಗಿತ್ತು. ಮುಂದೆ ಸಾಲಾಗಿ ಶಿಸ್ತಿನಿಂದ ನಿಂತಿದ್ದ ಅಶ್ವಸೈನಿಕರು ಜಯಜಯಕಾರದೊಡನೆ ಪ್ರಣಾಮಗಳನ್ನು ಸಲ್ಲಿಸಿದರು. ವೀರಭದ್ರನಾಯಕನು ಚೆನ್ನಮ್ಮನನ್ನು ಕರೆದುಕೊಂಡು ಆ ದಳದೊಡನೆ ಕವಲಪುರಕ್ಕೆ ಬಂದನು.

ಇಕ್ಕೇರಿಗೆ ಹೋಗಿದ್ದ ಮುತ್ತನು ಮುಂದೆರಡು ದಿನಕ್ಕೆ ಅಲ್ಲಿಗೆ ಬಂದನು. ಗವಿಯು ಬರಿದಾಗಿತ್ತು. ಅವನು ಬೆರಗಾದನು. ತಪ್ಪಿಸಿಕೊಂಡು ಉಳಿದ ಒಬ್ಬಿಬ್ಬರು ಬೇಡರಿಂದ ‘ತಿಮ್ಮನಾಯಕ ಮೊದಲಾದವರು ಬಂದು ಕಾವಲಿ ಗರನ್ನೆಲ್ಲ ಸೆರೆಹಿಡಿದು ಅರಸನನ್ನು ಕರೆದುಕೊಂಡು ಹೋದರು’ ಎಂಬುದು

ತಿಳಿಯಿತು. 'ತಿಮ್ಮನಾಯಕರು ಅರಸರ ಪಕ್ಷಕ್ಕೆ ಮರಳಿದರೆ ? ಹಾಗಾದರೆ ನಾವೇಕೆ ಸದಾಶಿವನ ಹಿತಮಾಡಹೋಗಬೇಕು ? ನಾನೂ ಸಮಯ ಸಾಧಿಸಿ ತಿಮ್ಮನಾಯಕರನ್ನು ಕೂಡಿದರಾಯಿತು. ಒಟ್ಟಿಗೆ ಕೆಟ್ಟಮನಸ್ಸಿನ ಸದಾಶಿವನಿಗೇ ಕೆಡುಗಾಲ ಬಂದಿದೆ. 'ಧರ್ಮವೇ ಜಯ ಪಡೆಯುವದು' ಎಂಬ ಮಾತು ಸುಳ್ಳಲ್ಲ! ಎಂದು ಮನಸ್ಸಿನಲ್ಲಿ ವಿಚಾರಿಸಿಕೊಂಡು ತನ್ನ ನಿವಾಸದ ಹಳ್ಳಿಗೆ ಹೋದನು.

—

# ೧೧. ಸೇತಾ ನೀತಿಯ ವಿಜಯ.

ವೀರಭದ್ರನು ಬಂದಿತನಾಗಿ ಗುಪ್ತಗವಿಯಲ್ಲಿ ಬಂದು ಬಿದ್ದುದನ್ನು ಮಂತ್ರಿಯ ಮುಖದಿಂದ ಕೇಳಿ ಸದಾಶಿವನಿಗೆ ಹಿಡಿಸದಷ್ಟು ಹಿಗ್ಗು! ಮಂತ್ರಿಯನ್ನು ಒಳಿತಾಗಿ ಸನ್ಮಾನಿಸಿದ್ದನು. ವೀರಭದ್ರನನ್ನು ಲಕ್ಷವಿಟ್ಟು ಕಾಯಲು ಪ್ರೋತ್ಸಾಹಿಸಿ ಆವನನ್ನು ಮರಳಿ ಕಳುಹಿದ್ದನು. ಇನ್ನು ಕವಲಪುರದ ಮೇಲೆ ಸಾಗಿ ಹೋಗಿ ಲಿಂಗರಾಜ-ಶಂಕರನಾರಾಯಣ ಮೊದಲಾದವರನ್ನು ಸೆರೆಹಿಡಿದು ತಂದಬಳಿಕ, ವೀರಭದ್ರನ ವ್ಯವಸ್ಥೆಮಾಡಬೇಕೆಂದು ಅವನ ಎಣಿಕೆ. ಈ ವಿಚಾರವನ್ನು ಪುಟ್ಟಣ್ಣನಿಗೂ ರಾಮ ಹೆಗ್ಗಡೆಗೂ ತಿಳಿಸಿ, ಯುದ್ಧದ ಸೌರಣೆ ನಡಿಸಿದನು. ತಮ್ಮ ಪತ್ರದಿಂದ ವಿಚಾರಣೆಗೆ ಬಂದ ಘಂಟಿಯೊಡೆಯನ ಮಂತ್ರಿಯು ಮುಂದೆ ಕೃತಕ ಸಾಕ್ಷಿಗಳನ್ನು ಕೊಟ್ಟು ವೀರಭದ್ರನ ಮೇಲಿನ ದೋಷಾರೋಪಣೆಯು ನಿಜವೆನಿಸುವಂತೆ ಮಾಡಿದನು. ಅದರ ಪರಿಣಾಮವಾಗಿ ತಾರುಣ್ಯದ ಅಲ್ಪವಿಚಾರಿಯಾದ ಘಂಟಿಯೊಡೆಯನು ತನ್ನ ಹೆಂಡತಿಯನ್ನೂ ಆಕೆಯ ತಂಗಿಯನ್ನೂ ವೀರಭದ್ರನೇ ಅಪಹರಿಸಿರಬಹುದೆಂದು ಸಂಶಯಪಟ್ಟನು. ತನ್ನ ಕೂಸನ್ನು ತರಿಸಿಕೊಂಡನು. ಅದೇನು ನಿಜಸಂಗತಿಯನ್ನು ಹೇಳಬಲ್ಲುದೇ? ವೀರಭದ್ರನ ಕೂಡ ಸೀಮೆಯ ಜಗಳವಂತೂ ಇದ್ದೇ ಇತ್ತು. ಈಗ ಅಲ್ಲಿಯ ಕೋಟೆಗಳು ಕೈಗೆ ಬರುವವೆಂಬುದೊಂದಾಸೆ! ಆದ್ದರಿಂದ ತನ್ನ ಸ್ನೇಹಿತನಾದ ಸ್ವಾದೆಯ ಆರಸನನ್ನು ಕೂಡಿಕೊಂಡು ಸದಾಶಿವನ ಸಹಾಯಕ್ಕಾಗಿ ಇಕ್ಕೇರಿಗೆ ಬಂದನು.

ಹಿಂದೆ ಹೇಳಿದಂತೆ ವೀರಭದ್ರ ನಾಯಕನು ಸೆರೆಯಿಂದ ಪಾರಾಗಿ ತನ್ನ ಸೇನಾಧಿಕಾರಿಗಳೊಡನೆ ಕವಲಪುರಕ್ಕೆ ಬಂದ ಬಳಿಕ, ಅಲ್ಲಿಗೆ ಇಕ್ಕೇರಿಯಿಂದ

ಮಹತ್ವದ ಸುದ್ದಿಗಳು ಬರಹತ್ತಿದ್ದವು. ಅವುಗಳಲ್ಲಿಯೂ ನಿರುಪದ್ರವಿಯಾದ ಬಸವಲಿಂಗನಾಯಕನನ್ನು ಕೊಂದುದನ್ನು ಕೇಳಿ ಕವಲಪುರದವರು ಸದಾಶಿವನಿಗಾಗಿ ತೀರಾ ಅಸಹ್ಯಪಟ್ಟುಕೊಂಡರು. ಸದಾಶಿವನ ದುರ್ವರ್ತನದಿಂದಲೂ ಕಪಟತಂತ್ರಗಳಿಂದಲೂ ವೀರಭದ್ರರಾಜನೂ ಬೇಸರುವಂತಾಯಿತು. ವೀರ ಒಡೆಯನು ಸಿಂಹಾಸನದ ಮೇಲೆ ಇರುವಾಗ ಹೇಗಾದರೂ ಅವನು ವಂಶದ ಹಕ್ಕಿನವನೆಂದು ಆತನು ಕೈಕಾದಿದ್ದನು. ಈಗ ಆತನ ತಾಳ್ಮೆ ಮೀರಿತು. ತನ್ನನ್ನು ನಾಶಗೊಳಿಸಲು ಹಲವು ಸಾರೆ ಯತ್ನಿಸಿದುದೂ ಕರುಣೆಗೆ ಪಾತ್ರನಾದ ಬಸವಲಿಂಗನಾಯಕನನ್ನು ಕ್ರೂರತನದಿಂದ ಕೊಂದುದೂ, ತಾನೇ ಬೀಳಗಿ ಸ್ವಾದೆಗಳ ಅರಸರನ್ನು ಕೂಡಿಕೊಂಡು ಕವಲಪುರದ ಮೇಲೆ ದಂಡೆತ್ತಿ ಬರುವದೂ ವೀರಭದ್ರನನ್ನು ಕೆರಳಿಸಿದವು. ಆತನು ಸದಾಶಿವನನ್ನೂ ಪುಟ್ಟಣ್ಣ ಮೊದಲಾದ ಅವನ ಅನುಯಾಯಿಗಳನ್ನೂ ದಂಡಿಸಲು ಸಿದ್ಧನಾದನು. ಮತ್ತೊಬ್ಬನಾಗಿದ್ದರೆ ಈ ಎಲ್ಲ ತಪ್ಪುಗಳಿಗಾಗಿ ಸದಾಶಿವನನ್ನು ಹಿಡಿದು ಕೊಲ್ಲಿಸಬಹುದಾಗಿತ್ತು ಕ್ರೂರತನದಿಂದ ! ಆದರೆ ವೀರಭದ್ರನಾಯಕನು ಮೂಲತಃ ದೊಡ್ಡ ಮನಸ್ಸಿನವನು. ಆತನನ್ನು ಹಿಡಿದು ಸೆರೆಯಲ್ಲಿಡಬೇಕೆಂದೇ ಗೊತ್ತುಮಾಡಿದನು. ಕೂಡಲೆ ಸದಾಶಿವನ ಸೈನ್ಯವನ್ನು ಎದುರಿಸುವ ಸಿದ್ಧತೆಯನ್ನು ನಡೆಯಿಸಿದನು.

ಇಕ್ಕೇರಿಯಲ್ಲಿ ಬೆಳೆದ ಕೊಳೆಯನ್ನು ತೆಗೆದು ಬಿಸುಡಲು ವೀರಭದ್ರರಾಜನ ಭಟರಿಗೆ ಬಲು ಉತ್ಸುಕತೆ ! ಈ ವರೆಗೆ ಅರಸನ ಉದಾಸೀನತೆಯು ಅವರನ್ನು ಸುಮ್ಮನೆ ಕೂಡ್ರಿಸಿದ್ದಿತು. ಈಗ ಅಪ್ಪಣೆ ದೊರೆಯಿತು. ಅವರು ಭರದಿಂದ ಯುದ್ಧದ ಸಾರಣೆಗೆ ಎದ್ದರು. ಸೈನ್ಯದಲ್ಲಿ ಭಾಗಗಳನ್ನು ಮಾಡಿ ಅವುಗಳನ್ನು ಬೇರೆ ಬೇರೆ ಕೆಲಸಗಳಿಗೆ ನಿಯಮಿಸಿದರು : 'ಶರಜರಾಯನು ಕವಲಪುರದ ರಕ್ಷಣೆಗೆ ಇರಬೇಕು. ಅರಸನೂ ದಳಪತಿ ಲಿಂಗರಾಜನೂ ಮುಖ್ಯ ದಳದೊಡನೆ ಸದಾಶಿವನ ದಂಡಿಗೆ ಎದುರಾಗಬೇಕು. ಜಗನಾಯಕ-ತಿಮ್ಮನಾಯಕರು ತಮ್ಮ ತಮ್ಮ ಬಲಗಳೊಡನೆ ಇಕ್ಕೇರಿಯ ದಾರಿಯಲ್ಲಿ ತಟಸ್ಥರಾಗಿದ್ದು ತಮ್ಮವರಿಗೆ ಜಯವಾಗುವ ಲಕ್ಷಣಗಳು ತೋರಿದ ಕೂಡಲೇ ನೇರವಾಗಿ ಹೋಗಿ ಇಕ್ಕೇರಿಯನ್ನು ಹಿಡಿದುಕೊಳ್ಳಬೇಕು. ತಮ್ಮವರ ಬಲ ಕಡಿಮೆಯಾಯಿತೆನಿಸಿದರೆ ಅವರ ಸಹಾಯಕ್ಕೆ ಬರಬೇಕು.' ಎಂದು ಗೊತ್ತು

ಯಿತು. ಸದಾಶಿವನ ದಂಡು ರಣದಲ್ಲಿ ಸೋತು ಹಿಂದಕ್ಕೆ ಓಡಿದರೆ, ಅದಕ್ಕೆ ಇಕ್ಕೇರಿಯ ಆಶ್ರಯ ದೊರೆಯಬಾರದೆಂದು ವೀರಭದ್ರರಾಜನು ಅದನ್ನು ಮೊದಲೇ ಹಿಡಿಯುವ ಯೋಜನೆ ಮಾಡಿದ್ದನು.

ಮುಖ್ಯ ದಂಡು ಮೊದಲು ಸಿದ್ಧವಾಗಿ ಅರಮನೆಯ ಮುಂದಿನ ದೊಡ್ಡ ಬೈಲಲ್ಲಿ ನಿಂತಿತ್ತು. ಆಗ ಈ ಸೈನ್ಯದ ಸಾಲುಗಳ ನಡುವಿನ ಮಾರ್ಗದಲ್ಲಿ ಹಾಯ್ದು ಒಂದು ಮುಸುಕಿನ ಮೇಣೆಯು ಅವಸರದಿಂದ ಅರಮನೆಯ ಕಡೆಗೆ ಬಂದಿತು. ಅದು ಇಕ್ಕೇರಿಯ ರಾಜಮನೆತನದವರದು ಮಾತ್ರ ! ಯಾರ ದೆಂಬುದು ಯಾರಿಗೂ ತಿಳಿಯಲಿಲ್ಲ. ಯಾರೂ ಅದನ್ನು ತಡೆಯಲಿಲ್ಲ. ಅದು ಅರಮನೆಯ ಬಾಗಿಲಲ್ಲಿ ಇಳಿಸಲ್ಪಟ್ಟಿತು. ಪ್ರಾಯವು ಅದೇ ಬಿಮ್ಮೆಟ್ಟಿದ ಸುಂದರ ರಾಜಸ್ತ್ರೀಯೊಬ್ಬಳು ಮುಸುಕು ಸರಿಸಿ ಹೊರಗೆ ಬಂದಳು. ಅಂಜಂಜುತ್ತ ಅರಮನೆಯನ್ನು ಪ್ರವೇಶಿಸಿದಳು. ದಾಸನೊಬ್ಬನು ತೋರಿಸಿದ ಕೋಣೆಯ ಕಡೆಗೆ ಲಗುಬಗೆಯಿಂದ ನಡೆದು, ಬಾಗಿಲದೊಳಗೊಂದು ಕಾಲಿಟ್ಟು, ಮತ್ತೆ ಹಿಂದೆ ಸರಿದು, ಸ್ವಲ್ಪ ಮರೆಯಾಗಿ ನಿಂತುಕೊಂಡಳು.

ಆ ಕೋಣೆ ವೀರಭದ್ರರಾಜನ ವಿರಾಮಸ್ಥಳ; ಅಂದವಾಗಿತ್ತು; ವೀರ ಭದ್ರರಾಜನು ರಣದ ಉಡಿಗೆಯನ್ನು ತೊಟ್ಟು ನಿಲುವುಗನ್ನಡಿಯ ಮುಂದೆ ನಿಂತು ತಿದ್ದಿಕೊಳ್ಳುತ್ತಿದ್ದನು. ಆಗ ಚೆನ್ನಾದೇವಿಯ ಪ್ರತಿಬಿಂಬವು ಕನ್ನಡಿ ಯಲ್ಲಿ ಮೂಡಿತು. ವೀರಭದ್ರನು ಹೊರಳಿ ನೋಡಿದನು ಮುಂದೆ ಅವಳೇ ನಿಂತಿದ್ದಾಳೆ. ಸೀರೆ ಬಿಗಿದು ಉಟ್ಟಿದ್ದಾಳೆ; ನಡುವಿನ ಪಟ್ಟಿಗೆ ಖಡ್ಗವನ್ನು ಕಟ್ಟಿದ್ದಾಳೆ ! ನೋಡಿ, ಮೊಗದಲ್ಲಿ ನಗೆಮೂಡಿದ ರಾಜನೆಂದನು :

"ನಾನು ಹೇಳಿದ್ದು ಸರಿಕಾಣಲಿಲ್ಲವೇ ?"

"ನೀವು ಹೇಳಿದರೆ ಸರಿಕಾಣದೆ ಏನು ?"

"ಹಾಗಾದರೆ ಈ ವೇಷ ?"

"ನನ್ನ ಹಂಬಲ ಹೋಗಲೊಲ್ಲದು; ನಾನೇಕೆ ರಣಕ್ಕೆ ಬರಬಾರದೆನ್ನು ತ್ತೇನೆ."

ವೀರಭದ್ರರಾಜನು ನಗಹತ್ತಿದನು.

"ಸುಮ್ಮನೆ ನಗುತ್ತೀರಿ; ಒಮ್ಮೆ ಸಿಟ್ಟಿನಿಂದ ಹೇಳಿಬಿಟ್ಟರೆ ಒಳ್ಳೇದು ಬೇಡವೆಂದು."

"ನನಗೆ ಸಂತೋಷವಾಗುವ ನಿನ್ನ ಮಾತಿಗೆ ಸಿಟ್ಟು ಹೇಗೆ ಬಂದೀತು!"

"ಮಾತಿನಿಂದಾಗುವ ಸಂತೋಷ ಮಾತು ನಡಿಸುವದರಲ್ಲಿಲ್ಲವೇನೋ?"

ಎನ್ನುತ್ತಿರುವಾಗಲೇ ಅವಳ ಮೊಗದಲ್ಲಿ ಮುಗುಳು ನಗೆ ತೇಲಿತ್ತು. ಅವನ್ನು ಕಾಣುವದರಲ್ಲಿ ರಾಜನಿಗೆ ಸ್ವರ್ಗದ ಸುಖ ! ಆತನೆಂದನು :

"ಚೆನ್ನಾ, ರಣರಂಗದ ಆತುರವು ನಿನಗಿಷ್ಟೇಕೆ ? ಕೋಮಲೆ, ನವ ಬಾಲೆ; ನೀನು ಸಮರದಲ್ಲಿ ನಿಲ್ಲುವವಾದರೆ ನನ್ನ ಬಾಹುಗಳೇಕೆ ? ಸಮರ ವೀರ ಲಿಂಗರಾಜನೇಕೆ ? ಅಸಮಾನ ಸಾಮರ್ಥ್ಯದ ಸೈನ್ಯವೇಕೆ ? ಇವೆಲ್ಲ ಇದ್ದು ಮಾಡುವದೇನು ? ರಕ್ತಬೀಜರೇನಾದರೂ ನಮಗೆ ಇದಿರಾದರೆ, ನಾವು ಕೈಸಾಗದೆ ನಿಂತರೆ, ನೀನು ದುರ್ಗೆಯಂತೆ ರಣಕ್ಕಿಳಿದು ರಕ್ತಬೀಜರನ್ನು ಸಂಹರಿಸುವೆಯಂತೆ ಆಯಿತೇ ?"

"ಹುಂ, ಪುರಾಣವೂ ಬಂತು ನನ್ನ ಸಮಾಧಾನಕ್ಕೆ !"

"ಚಿಂತಿಸಬೇಡ ಚೆನ್ನಾ ! ಇನ್ನೊಮ್ಮೆ ನಿನ್ನಿಚ್ಛೆಯನ್ನು ಪೂರ್ಣ ಮಾಡುವೆನು. ಈಗ ನನ್ನನ್ನು ಸಂತೋಷದಿಂದ ಹೋಗಗೊಡು."

"ಆಗಲಿ, ಅಕ್ಕನವರೂ ನಾನೂ ಆರತಿ ಮಾಡಿ ಕಳುಹುವೆವು; ಅರ್ಚನ ಶಾಲೆಗೆ ಬಂದು ಹೋಗಬೇಕು" ಹರುಷ ತುಂಬಿದ ಮೊಗವನ್ನು ಮೇಲೆ ಮಾಡಿ ನುಡಿದಳು.

"ಅವಶ್ಯವಾಗಿ ಬರುವೆನು "

ಚೆನ್ನಾಂಬೆ ಮುಂದಾಗಿ ನಡೆದಳು. ಆಕೆ ಹೋದಕೂಡಲೆ, ಸಮಯ ನೋಡುತ್ತ ಹೊರಗೆ ಮರೆಯಲ್ಲಿ ನಿಂತಿದ್ದ ಸ್ತ್ರೀಯು ಒಳಗೆ ಬಂದಳು. ಮತ್ತು ವೀರಭದ್ರನ ಕಾಲಿಗೆರಗಿ ಕಣ್ಣೀರು ಸುರಿಸಿದಳು. ವೀರಭದ್ರನು ನೋಡಿ ಕೈಹಿಡಿದೆಬ್ಬಿಸಿ, " ತಂಗಿ ವೀರಾದೇವಿ, ಇದೇ ನಿಮ್ಮ ಆಕಸ್ಮಿಕ ಬರೋಣವು ? ನನ್ನಳಿಯ ಭದ್ರದೇವನು ಕುಶಲವೇ ?"

"ಚೆನ್ನಾಗಿದ್ದಾನಣ್ಣಾ, ಆತನೂ ನನ್ನಂತೆ ತನ್ನ ಹಡೆದವನ ಅವಿಚಾರ ತನದ ಬಗೆಗೆ ಕಳವಳಪಡುತ್ತಿರುವನು. ನನ್ನ ಪತಿಯು ದುರಭಿಮಾನದಿಂದ ನಿನಗೆ ಬಹಳ ತಾಪ ಕೊಟ್ಟನು. ಅಣ್ಣಾ, ಅವರಿಂದ ನೀನು ಬಹಳ ಕಷ್ಟವನ್ನು ಭೋಗಿಸಬೇಕಾಯಿತು...."

ಮುಖ ಮುಚ್ಚಿಕೊಂಡು ಅಳಹತ್ತಿದಳು.

"ಅದಕ್ಕೇನು ಮಾಡುವದು ತಂಗಿ ? ನಮ್ಮ ದೈವದಲ್ಲಿದ್ದುದನ್ನು ನಾವು ಉಣ್ಣಬೇಕು. ಆತನು ಭೋಗಿಸಬೇಕಾದುದನ್ನು ಭೋಗಿಸಬೇಕು. ಜನರ ಹಿತಕ್ಕಾಗಿ ನಮ್ಮ ಕರ್ತವ್ಯವನ್ನಂತೂ ಮಾಡಬೇಕಾಗಿದೆ. ನೀನು ನಮ್ಮ ತಂಗಿಯೆಂದೇ ಇದುವರೆಗೆ ಸಹನ ಮಾಡಿಕೊಂಡೆವು. ಇನ್ನು ಮುಂದಾದರೂ ನೀನು ಹೇಗೆ ಹೇಳಿದರೂ ಕೇಳುವೆವು ತಿಳಿಯಿತೇ ?"

"ಅಣ್ಣಾ ಕ್ರೋಧವಿರಲಿ, ನನ್ನೊಡನೆ ಹೀಗೆ ವ್ಯಂಗೋಕ್ತಿಗಳೇಕೆ ? 'ನೀವು ಮೊದಲಿನಂತೆ ಕಷ್ಟಗಳನ್ನೇ ಅನುಭೋಗಿಸುತ್ತಿರ್ರಿ, ನನ್ನ ಗಂಡನ ಮೇಲೆ ಕೈ ಮಾಡಬೇಡಿರಿ' ಎಂದು ಹೇಳಲಿಕ್ಕೆ ನಾನೀಗ ಸಾಹಸ ಮಾಡಿ ಬಂದಿಲ್ಲ. ನನ್ನ ಪತಿಗೆ ಯಾವ ಶಾಸನ ಮಾಡಿದರೂ ಅನ್ಯಾಯವಲ್ಲ. ಈಗ ನೀನು ಅವರನ್ನು ದಂಡಿಸುವದು ಯೋಗ್ಯವೇ ಆಗಿದೆ. ಅದನ್ನು ನಾನೆಂದೂ ತಪ್ಪಾಗಿ ತಿಳಿಯಲಾರೆನು. ಅವಶ್ಯವಾಗಿ ನೀನು ಅವರನ್ನು ದಂಡಿಸು. ಆದರೆ ಒಂದೇ ಮಾತು ಅಣ್ಣಾ ! ನೀನು ಕೇಳುವದಾಗಿದ್ದರೆ ಕೇಳು, ಕೇಳದಿದ್ದರೂ ನಿನ್ನ ತಪ್ಪಲ್ಲ; ನಿನ್ನನ್ನು ದೂಷಿಸಲಾರೆ...." ಮತ್ತೆ ಅಳಹತ್ತಿದಳು.

"ಕೇಳುವೆನು ಹೇಳಮ್ಮಾ, ನೀನು ಗೋಳಿಟ್ಟರೆ ನನಗೆ ಕಳವಳವಾಗುತ್ತದೆ."

"ತಂದೆಯ ಸ್ಥಾನದಲ್ಲಿ ನೀನು ನನಗೆ ಪೂಜ್ಯನು. ಅಜ್ಜನೂ ತಂದೆಯೂ ನನ್ನನ್ನು ಅವರಿಗೆ ಕೊಟ್ಟರು. ಅವರಿಂದ ಕಟ್ಟಿಸಿದ ಈ ಮಂಗಲಸೂತ್ರದ ರಕ್ಷಣೆಯು ಈಗ ನಿನ್ನ ಕೈಯಲ್ಲಿರುವದು. ಈ ಐದೆ ದಾಳಿಯನ್ನು ಕಾಪಾಡಿ ಅವರಿಗೆ ಯಾವ ಶಿಕ್ಷೆಯನ್ನಾದರೂ ಮಾಡಬೇಕು."

"ಇದನ್ನು ನೀನು ನನಗೆ ಹೇಳಬೇಕೇ ತಂಗಿ ? ನಮ್ಮ ನಿರ್ಣಯವೂ ಇದೇ ಆಗಿದೆ. ಸದಾಶಿವನಾಯಕರ ಜೀವಕ್ಕೆ ಯಾರೂ ಅಪಾಯ ಮಾಡಲಾಗದೆಂದು ನನ್ನ ಕಟ್ಟಾಜ್ಞೆಯಿದೆ. ನೀನು ಸ್ವಲ್ಪವರೂ ಚಿಂತಿಸಬೇಡ !"

"ಇದಕ್ಕೂ ಹೆಚ್ಚಿನದನ್ನೇನೂ ನಾನು ಬಯಸಲಾರೆನು."

ಬಳಿಕ ವೀರಭದ್ರನು ತಂಗಿಯೊಡನೆ ಒಳಮನೆಗೆ ಹೋಗಿ ಆಕೆಯ ಉಪಚಾರದ ವ್ಯವಸ್ಥೆ ಮಾಡಿದನು. ಬೇಗನೆ ಮಂಗಲಾಕ್ಷತೆಗಳನ್ನು ತಕ್ಕೊಂಡು ಬಂದು ಸೈನ್ಯವನ್ನು ಸೇರಿದನು.

ಶುಭವೇಳೆಯಲ್ಲಿ ಸೈನ್ಯವು ಸಾಗಿತು. ಅತ್ತ ಸದಾಶಿವನ ಬಲವೂ ಸಾಗಿ ಬಂದಿದ್ದಿತು. ಅಂದಿನ ರಾತ್ರಿ ದೇವರಣಾದ ಬೈಲಲ್ಲಿ ಉಭಯ ದಳಗಳು ಬೀಡುಬಿಟ್ಟವು. ಬೆಳಗಿಗೆ ಮೊದಲೇ ವೀರಭದ್ರನ ರಣಭೇರಿ ಮೊಳಗಿತು. ಸೂರ್ಯೋದಯಕ್ಕೆ ಸರಿಯಾಗಿ ಒಬ್ಬರ ಮೇಲೊಬ್ಬರು ಏರಿಹೋದರು. ಲಿಂಗರಾಜನ ಭಟರು ಸತ್ಪಕ್ಷದ ಸೇವೆಯೆಂದು ಜೀವದ ಹಂಗು ದೊರೆದು ಕಾದಿದರು. ಸ್ವತಃ ಲಿಂಗರಾಜನು ಅಂತಹ ವೀರಭಟರ ಚಾಲಕನು. ಅವನ ರಣಕೌಶಲವು ಮಿಗಿಲಾದುದು. ತನ್ನನ್ನು ಮೋಸಗೊಳಿಸಿ, ತಮ್ಮ ಕಾರ್ಯ ಸಾಧಿಸಿಕೊಂಡ ಈ ನರಗುರಿಗಳನ್ನು ಹಿಡಿದು ತಿನ್ನುವವನಂತೆ ವೈರಿಸೈನ್ಯವನ್ನು ಹೊಕ್ಕಿದ್ದನು. ವೈರಿಗಳು ತತ್ತರಿಸಿದರು. ಪುಟ್ಟಣ್ಣನಿಗೆ ಅನೇಕ ಗಾಯಗಳಾದವು. ಸ್ವಾದೆಯ ಅರಸನು ಈ ಹೊಡೆತಕ್ಕೆ ಬದಿಗಾದನು. ಪುಟ್ಟಣ್ಣನ ದಂಡಿನಲ್ಲಿ ಬಹುಜನರು ಮಡಿದರು. ಕೆಲವರು ಹಿಂದೆ ಸರಿದು ತಲೆ ತಪ್ಪಿಸಿಕೊಳ್ಳುತ್ತಿದ್ದರು. ಅದನ್ನು ನೋಡಿ ಪುಟ್ಟಣ್ಣನು ಮುಂದೆ ಬಂದು ಆರುವ ದೀಪದಂತೆ ಮತ್ತೆ ಕಾಳಗ ಕೊಟ್ಟನು. ಸ್ವಾದೆಯ ಅರಸನೂ ಲಿಂಗರಾಜನ ಮೇಲೆ ಬದಿಯಿಂದ ಏರಿಬಂದನು. ಏನಾದರೂ ಲಿಂಗರಾಜನು ಅವರಿಗೆ ಯಮನೇ ಆಗಿದ್ದನು. ವೈರಿಗಳ ವೀರತ್ವ ಕ್ಷಣಿಕವಾಯಿತು. ಒಂದೆರಡು ತಾಸು ಯುದ್ಧ ನಡೆಯುವಷ್ಟರಲ್ಲಿ ಪರಿಣಾಮವು ಮತ್ತೆ ಮೊದಲಿನಂತಾಯಿತು. ಎಲ್ಲರಿಗೂ ಮೊದಲೇ ಸ್ವಾದೆಯ ಭೂಪ ಓಡಿಹೋಗಿ ಶಿಬಿರವನ್ನು ಸೇರಿದನು. ಕುಟಿಲ ಪಟುವಾದ ಪುಟ್ಟಣ್ಣನು ರಣಪಟುಗಳೆದುರಲ್ಲಿ ಗತಿಗೆಟ್ಟು ಲಿಂಗರಾಜನ ದಂಡಿನವರ ಕೈಗೆ ಸಿಕ್ಕನು. ಅವರು ಅವನನ್ನು ಮುತ್ತಿ ಕೊಲ್ಲುತ್ತಿದ್ದರು. ಆದರೆ ಲಿಂಗರಾಜನು ಕೂಗಿ ಹೇಳಿದನು. "ಆ ದುಷ್ಟ ಮೃಗವನ್ನು ಕೊಲ್ಲದಿರಿ, ಅದು ನಮ್ಮ ಪಂಜರದಲ್ಲಿ ಜೀವಂತವಾಗಿರಲಿ" ಭಟರು ಕೈಕಾದು ಪುಟ್ಟಣ್ಣನನ್ನು ಬಂಧಿಸಿದರು. ಅಷ್ಟು ಹೊತ್ತಿಗೆ ಅಲ್ಲಿ ವೈರಿಗಳು ಯಾರೂ ಉಳಿದಿರಲಿಲ್ಲ. ಲಿಂಗರಾಜನು ಪುಟ್ಟಣ್ಣನನ್ನು ಹಿಡಿದುಕೊಂಡು ತನ್ನ ಎಲ್ಲ ದಂಡಿನೊಡನೆ ಇಳಿಹೊತ್ತಿಗೆ ಶಿಬಿರಕ್ಕೆ ಬಂದು ಅರಸನನ್ನು ಆನಂದಗೊಳಿಸಿದನು.

ಸ್ವಾದೆಯ ಅರಸನು ಓಡಿಬಂದು ಬೀಡು ಸೇರಿದಾಗಲೇ ಬೀಡಿನಲ್ಲಿದ್ದ ಸದಾಶಿವನೂ ಘಂಟೆಯೊಡೆಯನೂ ರಣಕ್ಕೆ ಹೊರಡುವದನ್ನು ಬಿಟ್ಟು ಓಡಿ

ಹೋಗುವ ಸಿದ್ಧತೆ ನಡಿಸಿದ್ದರು. ಕಾಳಗದ ಪರಿಣಾಮವನ್ನು ಕೇಳಿ ಗಾಬರಿಯಾಗಿದ್ದರು. ವೀರಭದ್ರನು ಗವಿಯ ಸೆರೆಯಿಂದ ಪಾರಾಗಿ ಬಂದುದೂ, ಈಗ ಪುಟ್ಟಣ್ಣನು ವೈರಿಗಳ ಕೈಗೆ ಸಿಕ್ಕದೂ ಅವರ ಕಿವಿಗೆ ತಾಗಿ ಎದೆಯ ಕಟ್ಟನ್ನು ಒಡೆದು ಬಿಟ್ಟಿದ್ದವು. ದಂಡಿನವರು ಸೋತು ಹಿಂದುರುಗಿದ ಕೂಡಲೆ ಅವರು ಶಿಬಿರವನ್ನು ಕಿತ್ತುಕೊಂಡು ಆ ರಾತ್ರಿಯೇ ಹಿಂದೆ ಸರಿದರು. ಗಿರಿಯ ನಡುವಿನ ಒಂದು ಕಣಿವೆಯಲ್ಲಿ ಬೀಡು ಬಿಟ್ಟರು. ಮುಂಜಾನೆ ತಮ್ಮೆದುರಿನಲ್ಲಿ ಸದಾಶಿವನ ಶಿಬಿರವನ್ನು ಕಾಣದೆ ವೀರಭದ್ರರಾಜನು ಅದನ್ನು ಶೋಧಿಸಲು ವೀರರನ್ನು ಅಟ್ಟಿದನು. ಮಧ್ಯಾಹ್ನದೊಳಗಾಗಿ ಸದಾಶಿವನು ಬೀಡುಬಿಟ್ಟೆಡೆಯು ಗೊತ್ತಾಯಿತು. ಊಟದ ನಂತರ ವೀರಭದ್ರನ ದಂಡು ಅತ್ತ ನಡೆಯಿತು. ಅಲ್ಲಿಗೆ ಮುಟ್ಟಲು ಇಳಿಹೊತ್ತಾಯಿತು. ಕೂಡಲೆ ಅಲ್ಲೊಂದು ಸಣ್ಣ ಕಾಳಗವಾಯಿತು. ಶರಣು ಬರುವ ದ್ರೋಹಿಗಳನ್ನು ಕ್ಷಮಿಸಲಾಗುವದೆಂದು ಅರಸನು ಸಾರಿದ್ದರಿಂದ, ಸದಾಶಿವನ ದಂಡಿನ ಕೆಲವರು ದಯಾಳು ದೊರೆಯೊಡನೆ ಯುದ್ಧಮಾಡಲು ಮನಸ್ಸೊಪ್ಪದೆ ಅವನ ದಳಪತಿಗೆ ಶರಣುಬಂದರು. ಮಬ್ಬುಗತ್ತಲಾಗುವದರೊಳಗಾಗಿ ಸದಾಶಿವನ ಮುಕ್ಕಾಲು ಪಾಲು ಜನರು ಕರಗಿದರು. ಅವನ ದಳನಾಯಕರು ಕಾಲಿಗೆ ಬುದ್ಧೀ ಹೇಳಿದರು. ಸದಾಶಿವನೂ ಅದೇ ಹಾದಿಯ ಹಿಡಿದನು. ಅವನ ಮಿತ್ರರಾಜರ ಭಟರೂ ಕವಿದ ಕತ್ತಲೆಯಲ್ಲಿ ಗಿಡಗಂಟಿಗಳ ಗುಂಪಿನಲ್ಲಿ ಅಡಗಿ ಮಾಯವಾದರು.

ಸದಾಶಿವನೂ ಬೀಳಗಿ ಸ್ವಾದೆಗಳ ಅರಸರೂ ಎರಡು ದಿವಸ ಅರಣ್ಯದಲ್ಲಿ ಅಡ್ಡಾಡಿ ಅಳಿದುಳಿದ ಜನರೊಡನೆ ಇಕ್ಕೇರಿಯ ಕಡೆಗೆ ಬಂದರು. ಆದರೆ ಇಕ್ಕೇರಿಯನ್ನು ಈ ಮೊದಲೇ ತಿಮ್ಮನಾಯಕ-ಜಗನಾಯಕರು ತಮ್ಮ ವಶದಲ್ಲಿ ತೆಗೆದುಕೊಂಡಿದ್ದರು. ಇತ್ತ ಹಿಂದಿನಿಂದ ಅರಸನೂ ಲಿಂಗರಾಜನೂ ಬೆನ್ನಟ್ಟಿ ಬಂದರು. ತಮಗೆ ಆಶ್ರಯ ಸ್ಥಳವೇ ಇಲ್ಲದಂತಾಗಲು ಘಂಟಿಯೊಡೆಯನೂ ಸ್ವಾದೆಯ ಅರಸನೂ ಸದಾಶಿವನ ಹಿತದಲ್ಲಿ ತಿರಸ್ಕಾರವನ್ನು ತೋರಿ, ತಮ್ಮ ರಾಜಧಾನಿಗಳ ಕಡೆಗೆ ನಡೆದರು. ಹೀಗೆ ಸದಾಶಿವನಾಯಕನ ಸ್ನೇಹಿತರು ಅಗಲಿದರು; ಸೇವಕರು ಕೈಬಿಟ್ಟರು; ಆಶ್ರಯದಾತರು ಅನಾದರ ಮಾಡಿದರು. ಎಲ್ಲ ರೀತಿಯಿಂದಲೂ ಗತಿಗೇಡುಆಗಿ ಆತನು ನಿರ್ವಾಹವಿಲ್ಲದೆ, ತಾನಾಗಿಯೇ ಘಂಟಿಯೊಡೆಯನನ್ನು ಹಿಂಬಾಲಿಸಿ ಬೀಳಗಿಯ ಸೇರಿದನು.

ದುರಾಶೆಯ ಸದಾಶಿವನು ಇನ್ನೂ ನಿರಾಶನಾಗಲಿಲ್ಲ. ಅವನು ಬೀಳಗಿಯಲ್ಲಿ—'ತನ್ನನ್ನು ಇಕ್ಕೇರಿಯ ಸಿಂಹಾಸನದ ಮೇಲೆ ಕೂಡ್ರಿಸಿದರೆ, ಅರ್ಧ ರಾಜ್ಯವನ್ನೇ ಕೊಡುವ'ದಾಗಿ ಹೇಳಿದನು. ಆ ಆಸೆಯಿಂದ ಬೀಳಗಿ ಸ್ವಾದೆಗಳ ಅರಸರು ಇಕ್ಕೇರಿಯ ರಾಜ್ಯದ ಗಡಿಯಲ್ಲಿ ಹಲವು ಹಂಚಿಕೆಗಳಿಂದ ದಂಡು ಕೂಡಿಸಹತ್ತಿದರು. ಇದನ್ನು ತಿಳಿದು ವೀರಭದ್ರರಾಜನು ಬೀಳಗಿಯ ಮೇಲೆ ಲಿಂಗರಾಜನನ್ನು ಸ್ವಾದೆಯ ಮೇಲೆ ತಿಮ್ಮನಾಯಕನನ್ನು ಕಳುಹಿಸಿಕೊಟ್ಟನು. ಅವರು ಬಿರುಗಾಳಿಯಂತೆ ಸಾಗಿಬಂದು ಬೀಳಗಿ ಸ್ವಾದೆಗಳನ್ನು ಹಿಡಿದುಕೊಂಡುಬಿಟ್ಟರು ತಮ್ಮನ್ನು ಎದುರಿಸಬಂದ ಅವುಗಳ ಅರಸರನ್ನು ಸೋಲಿಸಿ ಅವರ ರಾಜ್ಯಗಳಿಂದ ಹೊರಗಟ್ಟಿಬಿಟ್ಟರು. ಬೀಳಗಿಯಲ್ಲಿದ್ದ ಸದಾಶಿವನನ್ನು ಹಿಡಿದೊಯ್ಯಬೇಕೆಂದು ಲಿಂಗರಾಜನು ಆ ನಗರದಲ್ಲೆಲ್ಲ ಹುಡುಕಿಸಿದನು. ಆದರೆ ಸದಾಶಿವನು ಸಿಗಲೇಯಿಲ್ಲ.

○ ○ ○ ○

ವೀರಭದ್ರರಾಜನು ವಿಜಯೋತ್ಸವದೊಡನೆ ಇಕ್ಕೇರಿಯನ್ನು ಪ್ರವೇಶಿಸಿದನು. ಸರ್ವರು ಸಂಭ್ರಮದಿಂದ ಆತನಿಗೆ ಮತ್ತೊಮ್ಮೆ ಪಟ್ಟಾಭಿಷೇಕ ಮಾಡಿದರು ಚೆನ್ನಾಂಬೆಯೊಡನೆ ಮದುವೆಯಾಯಿತು, ರಾಣಿಯರ ಒಲುಮೆ ಪ್ರಜಾನುರಾಗ,ಪರಿವಾರದ ನಿಷ್ಠೆ ಇವುಗಳಿಂದ ರಂಜಿತನಾದ ವೀರಭದ್ರನಾಯಕನು ಸರ್ವರಿಗೂ ಸುಖವಾಗುವಂತೆ ರಾಜ್ಯವನ್ನಾಳಿದನು. ಆಗ ಎಲ್ಲೆಲ್ಲಿಯೂ

ನೆಮ್ಮದಿ. ಸೊಬಗು. ಆನಂದ.

○ ○ ○ ○

ಸದಾಶಿವನು ಮುಂದೆ ಯಾರ ಕಣ್ಣಿಗೂ ಬೀಳಲೇ ಇಲ್ಲ. ಹಲವು ದಿವಸಗಳ ಮೇಲೆ ವೀರಾದೇವಿಯು ತನ್ನ ವೈಧವ್ಯವನ್ನು ನಿರ್ಣಯಿಸಿಕೊಂಡು, ಅಣ್ಣನ ವೈಭವದಲ್ಲಿ, ಮಗನ ಬೆಳವಣಿಗೆಯನ್ನು ನಿರೀಕ್ಷಿಸುತ್ತ ಜಂಬೂರ ಉಂಬಳಿಯಲ್ಲಿ ಕಾಲವನ್ನು ಕಳೆಯಹತ್ತಿದಳು.

—

ಈ ಕತೆಗೆ ಕೊನೆಯಾಗಿರುವ

## ಇನ್ನು ಕೆಲವು ಐತಿಹಾಸಿಕ ಸಂಗತಿಗಳು

ಇಕ್ಕೇರಿಯ ಪಸತಿಗಳು ಬೀಳಗಿ-ಸ್ವಾದೆಗಳ ಅರಸರನ್ನು ಸೋಲಿಸಿ ಅವರನ್ನು ಉತ್ತರಕ್ಕೆ ಓಡಿಸಿದರು. ಆ ಇಬ್ಬರು ರಾಜರು ವಿಜಾಪುರದ ರಾಜ್ಯವನ್ನು ಸೇರಿ ಪಾರಾದರು. ಅವರು ಹಾಗೆಯೇ ವಿಜಾಪುರಕ್ಕೆ ಬಂದು ಮುಹಮ್ಮದ ಆದಿಲಶಹನಿಗೆ ಮೊರೆ ಬಿದ್ದರು. ಅವರು ಬಾದಶಹನಿಗೆ ಅರ್ಪಿಸಿದ ಮನವಿಯ ಸಾರಾಂಶವು ಹೀಗಿದ್ದಿತು :

"ಇಕ್ಕೇರಿಯ ರಾಜ್ಯದಲ್ಲಿ ವೀರಭದ್ರನೆಂಬ ಬಂಡುಗಾರನು ಪ್ರಬಲನಾಗಿ ಅಲ್ಲಿಯ ಅರಸನಾದ ಸದಾಶಿವನಾಯಕರನ್ನು ತಳ್ಳಿ ಸಿಂಹಾಸನವನ್ನು ಹಿಡಿದುಕೊಂಡಿದ್ದಾನೆ, ಅಲ್ಲದೆ ನಾವು ಸದಾಶಿವನಾಯಕನಿಗೆ ಸಹಾಯ ಮಾಡಿದೆವೆಂಬ ಸಿಟ್ಟಿನಿಂದ ನಮ್ಮ ರಾಜ್ಯಗಳನ್ನು ಅಪಹರಿಸಿದ್ದಾನೆ. ಬಲಶಾಲಿಗಳಾದ ಮಹಾಪ್ರಭುಗಳು ತಾವು ಈಗ ಇಕ್ಕೇರಿಯ ಮೇಲೆ ದಂಡು ಕಳಿಸಿ ಬಂಡುಗಾರರನ್ನು ಸೋಲಿಸಿ ಸದಾಶಿವನಾಯಕನನ್ನು ಪಟ್ಟಕ್ಕೆ ಕುಳ್ಳಿರಿಸಬೇಕು, ನಮ್ಮ ರಾಜ್ಯಗಳನ್ನು ನಮಗೆ ಕೊಡಿಸಬೇಕು. ನಾವೂ ಇಕ್ಕೇರಿಯ ಅರಸನೂ ಬಾದಶಹರಿಗೆ ಮಾಂಡಲಿಕರಾಗಿ ಕಪ್ಪುಗಾಣಿಕೆ ಸಲ್ಲಿಸುತ್ತಿರುವೆವು. ಈ ದಾಳಿಯ ವೆಚ್ಚವನ್ನು ವಹಿಸುವೆವು........"

ಈ ಬಿನ್ನಹವನ್ನು ಬಾದಶಹನು ಮನ್ನಿಸಿ ಸಮ್ಮತಿಸಿದನು. ರಣದುಲ್ಲಾಖಾನನೆಂಬ ಸರದಾರನನ್ನು ದಂಡಿನೊಡನೆ ದಕ್ಷಿಣಕ್ಕೆ ಕಳುಹಿದನು. ಅವನು ನರಗುಂದದವರೆಗೆ ಬಂದನು. ಬಾದಶಹನ ದಂಡಿನೊಡನೆ ಯುದ್ಧಕ್ಕೆ ನಿಲ್ಲುವ ಮೊದಲು, ಸಾಮೋಪಾಯದಿಂದ ಯತ್ನಿಸಿ, ಬಾದಶಹನಿಂದ ನ್ಯಾಯವನ್ನು ದೊರಕಿಸುವದೇ ಮೇಲೆಂದು ವೀರಭದ್ರರಾಜನು ಶಂಕರನಾರಾಯಣನನ್ನು ವಿಜಾಪುರಕ್ಕೆ ಕಳುಹಿದನು. ಆತನು ಬರುವಾಗ ದಾರಿಯಲ್ಲಿ ಬಾಗಿಲಕೋಟೆಯಲ್ಲಿ ಬಾದಶಹನ ಮಂತ್ರಿ ಮುರಾರಿದೇವನಿರುವನೆಂಬದನ್ನು ಕೇಳಿ ಮೊದಲು ಅಲ್ಲಿಗೇ ಹೋದನು.

ಚತುರನಾದ ಶಂಕರನಾರಾಯಣನು, ಇಕ್ಕೇರಿಯ ರಾಜಪರಂಪರೆಯಲ್ಲಿ ವೀರಭದ್ರನೇ ಅರಸನೆಂದೂ, ಸರದಾರನಾಗಿದ್ದ ಸದಾಶಿವನೇ

ದೊಂಬೆಯೆಬ್ಬಿಸಿ ಹಲವು ಅನರ್ಥಗಳನ್ನು ಮಾಡಿದನೆಂದೂ ಮುರಾರಿ ದೇವನಿಗೆ ವಿವರಿಸಿ ಹೇಳಿ ಅವನನ್ನು ಒಲಿಸಿಕೊಂಡನು. ಮುರಾರಿ ದೇವನು ಆತನೊಡನೆ ವಿಜಾಪುರಕ್ಕೆ ಬಂದು ಬಾದಶಹನಿಗೆ ಸತ್ಯಸಂಗತಿಗಳನ್ನು ಅರಿಕೆ ಮಾಡಿಸಿದನು. ಬಾದಶಹನು ಒಪ್ಪಿದನು. ಆತನು ಬೀಳಗಿ-ಸ್ವಾದೆಗಳ ಅರಸರನ್ನು ಶಂಕರನಾರಾಯಣನನ್ನು ಕೂಡಿಸಿ, ಒಂದು ಒಡಂಬಡಿಕೆ ಮಾಡಿಸಿದನು.

೧) ಇಕ್ಕೇರಿಗೆ ವೀರಭದ್ರರಾಜನೇ ಅರಸನು. ವೀರಭದ್ರರಾಜನು ಬೀಳಗಿ-ಸ್ವಾದೆಗಳ ರಾಜ್ಯಗಳನ್ನು ಬಿಟ್ಟುಕೊಡಬೇಕು.

೨) ಬೀಳಗಿ-ಸ್ವಾದೆಗಳ ಅರಸರು ತಮ್ಮ ತಮ್ಮ ರಾಜ್ಯಗಳೊಳಗಿನ ಒಂದೊಂದು ಕೋಟೆಯನ್ನು ಬಾದಶಹನಿಗೆ ಕೊಡಬೇಕು: ಹಾಗೆಯೇ ಒಂದೊಂದು ಕೋಟೆಯನ್ನು ಇಕ್ಕೇರಿಯ ಅರಸನಿಗೆ ಕೊಡಬೇಕು.

೩) ಎಲ್ಲರೂ ಸ್ನೇಹದಿಂದಿರಬೇಕು.

ಈ ಒಡಂಬಡಿಕೆಗೆ ನಾಲ್ವರೂ ಅಂಕಿತ ಹಾಕಿದ ಬಳಿಕ ಬಾದಶಹನು ರಣದುಲ್ಲಾ ಖಾನನಿಗೆ ಇಕ್ಕೇರಿಯ ಮೇಲೆ ದಂಡೆತ್ತಿ ಹೋಗದೆ, ತನ್ನ ರಾಜ್ಯದ ಪಶ್ಚಿಮ ಸೀಮೆಯಲ್ಲಿ ಹಾವಳಿ ನಡಿಸಿದ ಪೋರ್ತುಗೀಜರನ್ನು ದಂಡಿಸಲು ಹೋಗಬೇಕೆಂದು ಆಜ್ಞೆ ಕಳುಹಿದನು

ಶಂಕರನಾರಾಯಣನು ಹೀಗೆ ಮಾಡಿಕೊಂಡ ಒಡಂಬಡಿಕೆಯನ್ನು ವೀರಭದ್ರರಾಜನು ಮೆಚ್ಚಿ ಒಪ್ಪಿಕೊಂಡನು

ಈ ರೀತಿಯಾಗಿ ಇಕ್ಕೇರಿಯ ರಾಜ್ಯದ ಗಂಡಾಂತರಗಳು ಕೊನೆಗೊಂಡವು. ದುರಾಕ್ರಮಣ ಮಾಡಿದ ದುರ್ಜನರು ದುರವಸ್ಥೆಗೀಡಾದರು. ಸುನೀತಿಯ ಚತುರ ನೇತಾ ವೀರಭದ್ರರಾಜನು ವಿಜಯಶಾಲಿಯಾದನು.

ವೀರಭದ್ರರಾಜನು ಇಕ್ಕೇರಿಯ ಅಘೋರೇಶ್ವರ ದೇವಸ್ಥಾನಕ್ಕೂ ಮಠಗಳಿಗೂ ಕ್ರಿ. ವ. ೧೬೩೨ ರಲ್ಲಿ, ಉಡುಪಿ ಕೃಷ್ಣ ದೇವಸ್ಥಾನಕ್ಕೆ ಕ್ರಿ ವ. ೧೬೪೧ ರಲ್ಲಿ ಕೊಲ್ಲೂರ ಮೂಕಾಂಬಿಕಾ ದೇವಸ್ಥಾನಕ್ಕೆ ಕ್ರಿ ವ ೧೬೪೧ ವಿಪುಲವಾಗಿ ಉಂಬಳಿ ಹಾಕಿಕೊಟ್ಟು, ಅವು ಸ್ಥಿರವಾಗಿ ನಡೆಯುವಂತೆ ಶಿಲಾಶಾಸನ ಮಾಡಿಸಿದನು. ಧರ್ಮದಿಂದ ರಾಜ್ಯಪರಿಪಾಲನೆ ಮಾಡಿದನು.

ಶುಭಂ–ಮಂಗಲಂ.

# ನಮ್ಮ 'ನವ ಪ್ರಕಟನೆಗಳು" ಕುರಿತ ಅಭಿಪ್ರಾಯಗಳು

## ಗರತಿಯ ಬಾಳು

"ಕೇವಲ ವಚನಗಳು, ಸಾಂಗತ್ಯಗಳು, ಜಾನಪದಗಳಿಂದಲೇ ಒಂದು ರಮ್ಯ ಪ್ರಬಂಧವನ್ನು ಕಡೆದು ಕನ್ನಡಿಯಂತೆ ನಮ್ಮ ಮುಂದೆ ಎತ್ತಿ ಹಿಡಿಯಲು ಬರುವದೆಂಬುದನ್ನು ಶ್ರೀ ಸಿಂಪಿ ಲಿಂಗಣ್ಣನವರು ಲೀಲಾಜಾಲವಾಗಿ ಸಾಧಿಸಿ ತೋರಿದ್ದಾರೆ ಸರಳನಿರೂಪಣೆ, ಉದಾತ್ತಭಾವನೆ, ಭಾವಪ್ರಚೋದನೆ ಮತ್ತು ಪ್ರಬಂಧದ ವಿಚಾರಶೀಲತೆಯು ಬಹುಸುಂದರವಾಗಿದೆ. ಕಪ್ಪುಕನ್ನಡಕ ತೊಟ್ಟ ಇಂದಿನ ಜನಾಂಗದ ಮೆಳ್ಳುಗಣ್ಣಿಗೆ ಇಂತಹ ಹಾಲು ಕನ್ನಡಕವನ್ನು ಕೊಟ್ಟು ಈ ವಿಶ್ವದ ಅನಂತರಮ್ಯತೆಯನ್ನು ತೋರಿಸುವ ಯತ್ನಮಾಡಬೇಕಾದುದು ಸೂಕ್ತವೂ ಸಮಯೋಚಿತವೂ ಆಗಿದೆ. ಇಂತಹ ಕೆಲಸವನ್ನು ಇಷ್ಟು ಸರಸವಾಗಿ ತಮ್ಮದೇ ಆದ ವಿಶಿಷ್ಟತೆಯಿಂದ ಸಾಧಿಸಿದ ಸ್ವಯಂ ಸಿದ್ಧಿಗಾಗಿ ಶ್ರೀ ಲಿಂಗಣ್ಣನವರು ಶ್ಲಾಘನೀಯರು. ಇಂದಿನ ಹೊಲಸು ಕಾದಂಬರಿ ಹಬ್ಬಿ ಹಾವಳಿ ಯೆಬ್ಬಿಸುತ್ತಿರುವ ಈ ಸಂದರ್ಭದಲ್ಲಿ ಇಂತಹ ಕೆಲವೆ ಕೆಲಸಾದರೂ ನಿರ್ಮಲ ಜೀವನದ ನಿರೂಪಣೆ ಕನ್ನಡ ಸಾಹಿತ್ಯಕ್ಕೆ ಕೂಡಿ ಬಂದರೆ ಅದೇ ಒಂದು ಪುಣ್ಯವೆಂದು ನಾವು ಭಾವಿಸುವೆವು "

—"ವೀರಭೂಮಿ" ಉಡಿಪಿ

## ಮಾಯಾ ಪ್ರಭಾವ

"ಜೀವಂತ ಕಲಾವ್ಯಕ್ತಿಗಳನ್ನು ಅನೇಕ ಕಡೆ ಉಚಿತ ಉದಾತ್ತ ಸಹಜ ಗತಿಯಿಂದ ಕಾದಂಬರಿಯ ಪಾತ್ರಗಳಾಗಿ ಬಳಸಿಕೊಂಡ ಎದೆಗಾರಿಕೆಯನ್ನು ಮೆಚ್ಚತಕ್ಕದ್ದಾಗಿದೆ. ಕಾದಂಬರಿಯ ಲೇಖನಶೈಲಿ ಸಹಜವಾಗಿ ಸರಳ ಸುಂದರವಾಗಿದೆ. ಕಥೆ ವೇಗವಾಗಿ ಓದಿಸಿಕೊಂಡು ಹೋಗುತ್ತದೆ. ಪಾತ್ರಗಳ ಬಾಯಿಂದ ಆಡಿಸುವ ಮಾತುಗಳಲ್ಲಿ ಅರ್ಥವಿದೆ, ತೂಕವಿದೆ. ಕನ್ನಡ

ಗಾದೆಯು ಮಾತುಗಳಂತೂ ಕಾದಂಬರಿಯು ಉದ್ದಕ್ಕೂ ಚೆಲ್ಲುವರಿದು ಕಾದಂಬರಿಯು ಮೌಲ್ಯವನ್ನು ಹೆಚ್ಚಿಸಿವೆ..... ಈ ಕಾದಂಬರಿಯು ಮುಂದಿನ ಕೃತಿಗೆ ಅಗತ್ಯವಾದ ಹಸನಾದ ಹಿನ್ನೆಲೆ ಇಲ್ಲಿ ಸಿದ್ಧವಾಗಿದೆ. ಹಿರಿಯಣ್ಣನ ಹಿರಿಯ ಕಲಾ ತಪಸ್ಸನ್ನು ಸಾಧನೆ ಮತ್ತು ಸಿದ್ಧಿಯನ್ನು ಅಲ್ಲಿ ನಿರೀಕ್ಷಿಸಬಹು ದಾಗಿದೆ. ಸಹಜ ಸುಂದರ ಶೈಲಿಯ ಕಲಾವಿಕಾಸದ ವಿಚಾರಪೂರ್ಣ ಸಂಭಾಷಣೆಗಳಿಂದ ಕೂಡಿದ ಈ 'ಮಾಯಾಪ್ರಭಾವ'ವು ಖಂಡಿತವಾಗಿಯೂ ಒಮ್ಮೆ ಓದಬೇಕಾದ ಕೃತಿ. ಹಿರಿಯಣ್ಣನ ಕಲಾಜೀವನ ವಿಕಾಸದ ಬಗ್ಗೆ ಶ್ರೀ ಸಿ. ವ. ಚೆನ್ನಬಸವೇಶ್ವರರು, ಈ ಕೃತಿಯ ಮುಂದಿನ ಭಾಗವನ್ನು ಬರೆದು ಕನ್ನಡ ಜನತೆಗೆ ಅರ್ಪಿಸಲೆಂದು ಆಶಿಸೋಣ."

—"ಜಯಂತಿ" ಧಾರವಾಡ

**ಕರುಳಿನ ಕರೆ**

"ನಿಮ್ಮ ಬಾಳಸಿಂಪಿಯಲ್ಲಿ ಅನರ್ಘ್ಯ ಮುತ್ತುಗಳೇ ಮೂಡಿದಂತೆ ನನ ಗನಿಸುತ್ತಿದೆ. 'ಕರುಳಿನ ಕರೆ' ಯಲ್ಲಿ ಹೇಳುವ ರೀತಿ ಮನೋಜ್ಞವಾಗಿದೆ. ಸನ್ನಿವೇಶ ಚಿತ್ರಣ ಬಲು ಸೊಗಸಾಗಿದೆ. ಕಣ್ಣು ತುಂಬಲಾಗುವಂತೆ ಕರು ಳನ್ನು ಹಿಂಡಿಬಿಡುವಂತಿದೆ. ಇಂಥ ಕರುಣಾರಸವನ್ನು ಹರಿಸುವ ಕಥನ ಶೈಲಿಯನ್ನು ಪಳಗಿಸಿಕೊಂಡ ಸೌಭಾಗ್ಯವತಿಗೆ ನನ್ನ ಹಾರ್ದಿಕ ಅಭಿನಂದನೆ. ಪ್ರತಿಯೊಂದು ಕತೆಯಲ್ಲಿ ಹೆಂಗರುಳಿನ ಕಕ್ಕುಲತೆಯ ಕರೆ ಓದುಗರ ಎದೆ ಯನ್ನು ಮುಟ್ಟಿ, ಕರುಳನ್ನು ತಟ್ಟುವದರಲ್ಲಿ ಸಂದೇಹವೇ ಇಲ್ಲ. ಅವರ ಈ ಲೇಖನಿಗೆ ಉಜ್ವಲ ಭವಿಷ್ಯವಿದೆಯೆಂದು ಹೇಳಲು ಅಭಿಮಾನವೆನಿಸುತ್ತದೆ.

— ಶ್ರೀ ಎಸ್. ಡಿ. ಇಂಚಲ. ಬೆಳಗಾವಿ

**ವಿಶ್ವಶಾಂತಿಯೆಡೆಗೆ**

"ನಮ್ಮ ಮಹಾರಾಷ್ಟ್ರದ ಮೂವರು ಮಹಾಪುರುಷರ ಮಹಾನು ಭಾವಗಳನ್ನು ಮನೋಹರವಾಗಿ ಮಂಡಿಸಿದ ಮನೋಹರರಾಯರ 'ವಿಶ್ವಶಾಂತಿಯೆಡೆಗೆ' ಎಂಬ ಕೃತಿ ಮಾನವಕುಲವನ್ನು ಮಾನವತೆಯೆಡೆಗೆ ಮಾರ್ಗದರ್ಶನ ಮಾಡುವ, ಸಂಸ್ಕೃತಿಯ ಪರಿಮಳ ಸೂಸುವ ಕನ್ನಡಿಗರ

ಕೈಗನ್ನಡಿಯಾಗಿದೆ. ಶಾಂತಿಗೀತ, ಶಾಂತಿಪಥ, ಶಾಂತಿಸೂಕ್ತಗಳ ತ್ರಿವೇಣಿ ಸಂಗಮದ ಶಾಂತಿ ಮಂದಾಕಿನಿಯಲ್ಲಿ ಕನ್ನಡಿಗರು ಮಿಂದು ಪಾವನರಾಗ ಲೆಂಬ ಉನ್ನತೋದ್ದೇಶದಿಂದ ಪ್ರಕಟಿಸಿದ ಶ್ರೀ ಅರವಿಂದ ಗ್ರಂ. ಮಾ. ಯ ಸಂಚಾಲಕರಿಗೆ ಕನ್ನಡಿಗರ ಕೃತಜ್ಞತೆ ಸಲ್ಲಬೇಕು. ಸಿಂಪಿ ಲಿಂಗಣ್ಣನವರ ಮುದ್ದಾದ ಮನನೀಯ ಮುನ್ನುಡಿ, ಕವಿತಿಲಕ ಶ್ರೀ ಅಂಬಿಕಾತನಯದತ್ತರ 'ಗಂಗಾವತರಣ'ದ ಸೂಕ್ತ ಹಿನ್ನುಡಿಯು ವಿವರಣೆ ಗ್ರಂಥದ ತೂಕ, ಶೋಭೆ ಹೆಚ್ಚಿಸಿವೆ."

—ಎಸ್. ಎಸ್. ಭೂಸರಡ್ಡಿ. ಕೊಣ್ಣೂರ

---

ನಮ್ಮ ಪ್ರಕಟನೆಗಳು ಮೈಸೂರ ಸರಕಾರದಿಂದ ಮಾನ್ಯತೆ ಪಡೆದಿವೆ.

ಡೈರೆಕ್ಟರ ಆಫ್ ಪಬ್ಲಿಕ್ ಇನ್ಸಟ್ರಕ್ಶನ್ ಇನ್ ಮೈಸೂರು, ಬೆಂಗಳೂರ ಅವರ ನಂ. C. L. 4-13-4/64-65 ಪತ್ರದ ಪ್ರಕಾರ ರಾಜ್ಯದ ಎಲ್ಲ ಪ್ರಾಥಮಿಕ ಹಾಗೂ ಹೈಸ್ಕೂಲ್ ಹೈಯರ ಸೆಕೆಂಡರಿ ಸ್ಕೂಲುಗಳ ಲೈಬ್ರರಿಗಳಿಗೆ ನಮ್ಮ ಪ್ರಕಟನೆಗಳನ್ನು ತರಿಸಿಕೊಳ್ಳಬಹುದೆಂದು ಮನ್ನಣೆ ನೀಡಿದ್ದಾರೆ.

—ಶಿಂಪಿ ಲಿಂಗಣ್ಣ

ಶ್ರೀ ಅರವಿಂದ ಗ್ರಂಥಾಲಯ, ಚಡಚಣ

ಜಿ. ಬಿಜಾಪೂರ

## "ಸಮಪ್ರಕಟನೆಗಳ" ಯೋಜನೆಗೆ ಸಹಾಯ ಸಲ್ಲಿಸಿದ

### ಮಹಾ ಪೋಷಕರು

1. ಶ್ರೀ ಮ. ನಿ. ಸಂಗನಬಸವ ಶಿವಯೋಗಿಗಳು ಬಂಥನಾಳ
2. ,, ಮೃತ್ಯುಂಜಯ ಸ್ವಾಮಿಗಳು ಕಿರೀಟಮಠ ಸೊಲ್ಲಾಪುರ
3. ,, ಮಲ್ಲಿಕಾರ್ಜುನ ಸ್ವಾಮಿಗಳು ಶಿವಾನಂದಮಠ ಗದಗ
4. ,, ಲಿಂಕಂಚಿ ರಾಮಣ್ಣನವರು ಜವಳಿ ಮರ್ಚಂಟ ಚಡಚಣ

### ಪೋಷಕರು

1. ಶ್ರೀ ವ್ಹಿ. ಎಂ. ಕೋರಿ B. A. LL. B. ಡೆ ಕಮಿಶನರ ಬಳ್ಳಾರಿ
2. ,, ರೇವಣಸಿದ್ದಪ್ಪನವರು ನಾವದಗಿ ಮರ್ಚಂಟ ವಿಜಾಪುರ
3. ,, ಬಿ. ಕೆ. ಚೌದರಿ ಮರ್ಚಂಟ ,,
4. ,, ಶಿವಯೋಗಪ್ಪ ತಂಬಾಕ ಮರ್ಚಂಟ ,,
5. ,, ಅಂಕಲಗಿ ಗೋಪಾಳರಾಯರು ,,
6. ,, ಅರವಿಂದ ಮಂಡಲದ ಸ್ನೇಹಿತರು ಚಡಚಣ
7. ಸಾವಿರದೇವರು ಶ್ರೀ ಗುರುಪಾದಸ್ವಾಮಿಗಳು ಹಿರೇಮಠ ಜಿಲ್ಲೆ ರಾಯಚೂರ
8. ಶ್ರೀ ರುದ್ರಪ್ಪಣ್ಣ ಜೋಗೂರ ಸಿಂದಗಿ
9. ,, ಬಾ. ಭಿ. ಪಾಟೀಲ ಹಾಲಹಳ್ಳಿ
10. ,, ಗಂಗಾಧರ ಶಾಸ್ತ್ರಿಗಳು ಕುಮಾರವಿಜಯ ನಾ. ಸಂ. ಚಿತ್ತರಗಿ
11. ಪೂಜ್ಯ ಶ್ರೀ ದೊಡ್ಡಪ್ಪನವರು ಅಪ್ಪಾ ಶರಣಬಸವೇಶ್ವರ ದೇವಸ್ಥಾನ ಗುಲಬುರ್ಗಾ
12. ಶ್ರೀ ಗಂಗಾಧರ ಪೀರಗೌಡ ಉಣಕಲ್ಲ
13. ,, ಎಂ. ಆರ್. ಜಹಾಗೀರದಾರ B.A., B. Ed., ಹೈಸ್ಕೂಲ, ಚಡಚಣ.
14. ,, ಕೆ. ಡಿ. ಸಂಗೋರಾಮ ವಕೀಲರು ಅಥಣಿ
15. ಡಾ. ಎಚ್. ಟಿ. ಸಾಸನೂರ M. A., Ph.D.
16. ಶ್ರೀ ಜಯದೇವಿತಾಯಿ ಲಿಗಾಡೆ ಸೊಲ್ಲಾಪುರ
17. ,, ಶಿವಾನಂದ ಸ್ವಾಮಿಗಳು ವಿರಕ್ತಮಠ ಚಡಚಣ
18. ,, ಬಿ. ಎಂ. ಪಾಟೀಲ B. A. g. ನಿವೃತ್ತ D Y. S. P. ಸಾಲೋಟಗಿ

19. ,, ತ್ರ್ಯಂಬಕರಾವ ಘಂಟೋಜಿ ಮರ್ಚಂಟ ಗುಲಬುರ್ಗಾ
20. ,, ರೇವಬಾಯಿ ಗುರಪ್ಪ ನಿಂಬರಗಿ· ಬೆನಕನಹಳ್ಳಿ
21. ಶ್ರೀ. ಮಲ್ಲಪ್ಪಣ್ಣನವರು ಎಳಮೇಲಿ ಮರ್ಚಂಟ ಚಡಚಣ(2 ಕಂತು ಬಂದಿವೆ)
22. ಶ್ರೀ ಸಿ. ವೀ. ಗಿದ್ನವರ B. A. ಯಮಕನಮರಡಿ (3 ಕಂತು ಬಂದಿವೆ)
23. ,, ಮಲ್ಲಪ್ಪ ಶಿವಲಿಂಗಪ್ಪ ಎಳಸಂಗಿ ಸಾಲೋಟಗಿ (2 ಕಂತು ಬಂದಿವೆ)
24. ,, ಸಿರಿವಂತಪ್ಪ ಶಿವಪ್ಪ ತರಡಿ ಪಲಸಂಗಿ (3 ಕಂತು ಬಂದಿವೆ)
25. ,, ಗವಿಮಠ ಜಗದ್ಗುರುಗಳು ಉರವಕೊಂಡ (2 ಕಂತು ಬಂದಿವೆ)
26. ,, ಎಸ್. ಎಸ್ ಭೂಸರಡ್ಡಿ ಕ. ಗಂ. ಶಾಲೆ ಕೊಣ್ಣೂರ( ,, )
27. ,, ನಿ. ಪ್ರ. ಗುರುಮಹಾಂತಸ್ವಾಮಿಗಳು ಇಳಕಲ್ಲ (ವಾಗ್ದಾನ)
28 ,, ಬಾಳಾಜಿ ರಾಮಚಂದ್ರ ದೇಶಪಾಂಡೆ ಅನಂತಪುರ ( ,, )
29. ,, ಜಿ. ಡಿ. ಪಾಟೀಲ M. L. A. ಚಾಂದಕವಟೆ ( ,, )
30. ,: ಶ್ರೀಮತಿ ಇಂದುಮತಿ ವಿಭೂತೆ, ಭುಸಾವಳ

---



ಶ್ರೀ ಲಕ್ಕಪ್ಪ ಅ. ಶಿರಹಟ್ಟಿ

ಮೂಲತಃ ಶಿಕ್ಷಕರಾದ ಇವರು ತಮ್ಮ ಪ್ರವೃತ್ತಿಯೊಂದಿಗೆ ಸುಲಲಿತ ಕಥೆಗಳನ್ನು ಬರೆಯುತ್ತ ಸಾಹಿತ್ಯ ಸೇವೆಗೆ ಕೈಯಿಕ್ಕಿದರು. ತಮ್ಮ ಕಾರ್ಯದಕ್ಷತೆಯಿಂದ, ಶಿಕ್ಷಕ ಸ್ಥಾನದಿಂದ ಶಿಕ್ಷಣಾಧಿಕಾರಿಗಳಾಗಿ ಮಾರ್ಪಾಡುಗೊಂಡು ಈಗ ವಿಶ್ರಾಂತಗೊಂಡವರು.

ಸಿದ್ಧರಾಮಚರಿತೆ ಚಿತ್ತೂರಿನ ಪುನರುದ್ಧಾರ ಕನ್ನಡಿಗನ ಕಲಿತನಗಳಂಥ ಗದ್ಯಗ್ರಂಥಗಳಲ್ಲಿ ಇವರ ಸುಲಭ-ಸುಗಮ ಶೈಲಿಯು ಕಂಗೊಳಿಸಿದರೆ, "ನೀತಿ ಮುಕ್ತಾವಲಿ" "ನೂರೊಂದು ನೆಶೆಗುನಿಲವು"ಗಳ ಕಾವ್ಯರೂಪದಲ್ಲಿ ಇವರ ಪಳಗಿದ ಲೇಖನಿಯು ಗೋಚರಿಸುತ್ತದೆ.

ಅಚ್ಚುಕಟ್ಟಾದ ಅವರ ಜೀವನದಂತೆ ಬಿಚ್ಚಿಟ್ಟ ಅವರ ಸಾಹಿತ್ಯದಲ್ಲಿಯೂ ತೂಕ, ತಾಳ, ಪ್ರಾಮಾಣಿಕತೆಗಳು ಮೂಡಿನಿಂತಿವೆ. ಜೀವನದಲ್ಲಿಯೇ ಆಗಲಿ, ಸಾಹಿತ್ಯದಲ್ಲಿಯೇ ಆಗಲಿ ಆಳಕ್ಕೆ ಇಳಿಯುವ ಸ್ವಭಾವ ಕಂಡು ಬರದಿದ್ದರೂ ವಿಶಾಲವಾದ ಅನುಭವ ಆಳವಾದ ಅಭ್ಯಾಸಗಳು ಹೆಡೆಯೆತ್ತಿರುವುದನ್ನು ಕಾಣುವೆವು.

"ಕಣ್ಣುಗಳೆಡು ಬಾಯ್ತಾನೊಂದು; ಬಾಯ್ತಾನೊಂದು ಕೈಯ್ಯಗಳೆಡು" ಎನ್ನುವಂತೆ ಎರಡು ನೋಡಿ ಒಂದು ಆಡುವುದೂ, ಒಂದು ಆಡಿ ಎರಡು ಮಾಡುವುದೂ ಅವರ ರಕ್ತ ಗುಣ. ಅದಕ್ಕಿಂತ ಹೆಚ್ಚಾಗಿ [illegible]ದೆ ಮಾಡುವ ರೂಢಿ ಬಹಳ ಅವರಿಗೆ. ಆ ಸಂಚು ಬಯಲಾಗುತ್ತಿದೆ– ಈ 'ಬಯಲಾದ ಸಂಚು' ಇದರಲ್ಲಿ.